ಬಾಲಸಾಹಿತ್ಯ ಮಂಡಲ,

ಲಿಮಿಟೆಡ್,

ಕೊಡಿಯಾಲಬೈಲು, ಮಂಗಳೂರು.

# ಯಜ್ಞಕುಂಡ

ಕಡೆಂಗೋಡ್ಲು ಶಂಕರ ಭಟ್ಟ ವಿರಚಿತ.

PRICE. 1-4-0.] [ಕ್ರಯ. ೧ ರೂ. ೪ ಆಣೆ.

# ರಾಜ್ಯಕುಂಡ

## ಒಂದನೆಯ ಅಂಕ

### ದೃಶ್ಯ ೧

[ಸಂಧ್ಯಾಕಾಲ. ಆಹೋರಿನ ಸಣ್ಣದೊಂದು ಮನೆ. ವಿಕ್ರಮ ಸಿಂಹನೂ ಶಾರ್ದೂಲ ಸಿಂಹನೂ ಮಾತಾಡುತ್ತಿರುವರು

**ಶಾರ್ದೂಲ.**— ವಿಕ್ರಮ, ನೀನು ಈಗೀಗ ಬೆಪ್ಪನಂತಿರುವುದೇಕೆ? ಬೆಟ್ಟದಿಂದ ಘೋಗೆಂದು ಹರಿದೋಡುವ ಪ್ರವಾಹದಂತೆ ನಿನ್ನ ಉತ್ಸಾಹವು ಹರಿಯುತ್ತಿತ್ತು. ಈಗ ಮಾತ್ರ ಅದೊಂದೂ ಇಲ್ಲ; ಆ ಆಟವಿಲ್ಲ, ಆ ಓಟವಿಲ್ಲ, ಸವಾರಿಯಿಲ್ಲ, ಬೇಟೆಯಿಲ್ಲ. ಉತ್ಸಾಹಕ್ಕೆ ಫಕ್ಕನೆ ಒಡ್ಡು ಹಾಕಿದವರು ಯಾರು? ಈಗ ನೀನು ಮಾಡುವ ಕೆಲಸವೆಂದರೆ, ನೋಟದ ಕಡೆಗೇ ನೋಡುವುದು; ಕುಳಿತಲ್ಲೇ ಕುಳಿತಿರುವುದು; ಪ್ರಪಂಚದಲ್ಲಿ ಹುಟ್ಟಿದ ಮಾನವನಿಗೆ ಈ ಎರಡೇ ಕೆಲಸಗಳಿದ್ದರೆ ಸಾಕೆಂದು ನಿನ್ನ ಈಗಿನ ಅಭಿಪ್ರಾಯ; ಅಲ್ಲವೆ? ಪ್ರಾಯವಿನ್ನೂ ಅರಳಲಿಲ್ಲ; ಆಮೊದಲೇ ಇಷ್ಟು ಉನ್ಮಾದ!

**ವಿಕ್ರಮ.**— ಹಾಗಾದರೆ ನನ್ನ ಅವಸ್ಥೆ ಶೋಚನೀಯವಲ್ಲವೇ?

**ಶಾರ್ದೂಲ.**— ಅಲ್ಲದೆ ಮತ್ತೇನು? ಹೃದಯಸಂತಾಪವನ್ನು ಮರೆಮಾಜುವುದಕ್ಕೆ ನಿನಗೀಗ ಗ್ರಂಥಾಧಾರವೇ ಬೇಕಾಗುತ್ತದೆ.

**ವಿಕ್ರಮ.**— ಹಾಗೆಂದರೇನು?

**ಶಾರ್ದೂಲ.**— ನಿನ್ನ ಮನಸ್ಸು ಕೆಟ್ಟಿದೆ ಎಂಬುವಕ್ಕೆ ಇದೇ ನಿದರ್ಶನ. ಮೊದಲು 'ಏನು?' ಎಂದು ಉಚ್ಚರಿಸುವುದಕ್ಕೇ ತಿಳಿಯದವನಿಗೆ ಈಗ ಮಾತು ಮಾತಿಗೂ 'ಏನು?'!

**ವಿಕ್ರಮ.**— ಏನೆಂಬ ಪದವನ್ನು ಇಂದೇ ಕಲಿತುದು ನಾನು! (ನಗುವನು.)

**ಶಾರ್ದೂಲ.**—ಕೈಯಲ್ಲಿ ದೊಡ್ಡದೊಂದು ಗ್ರಂಥ ಹಿಡಿದರೆ ಹೃದಯ ಕಲ್ಮಷಗಳೆಲ್ಲಾ ಅಡಗಿಹೋಗುತ್ತವೆ, ಎಂದರೆ, ಇನ್ನೊಬ್ಬರಿಗೆ ಕಾಣಿಸುವುದಿಲ್ಲ!

**ವಿಕ್ರಮ.**—ನೀನು ಹೇಳಿದ ಗ್ರಂಥಾಧಾರವೆಂದರೆ ಇದೆಯೋ!

**ಶಾರ್ದೂಲ.**—ಹೌದು, ಇದುವೇ ಗ್ರಂಥಾಧಾರವೆಂದರೆ. ಮೊನ್ನೆ ಒಂದು ದಿನ ನೀನು ಗ್ರಂಥಾಧಾರವನ್ನು ಪಡೆದುಕೊಂಡು, ಎಂದರೆ, ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದುಕೊಂಡು ಓದುತ್ತಿದ್ದೆ.

**ವಿಕ್ರಮ.**—ಪುಸ್ತಕವನ್ನೋದುವವರು ಕಲ್ಮಷಹೃದಯರು; ಅಲ್ಲವೇ?

**ಶಾರ್ದೂಲ.**—ಓದುವವರೆಲ್ಲರೂ ಅಲ್ಲ; ನಿನ್ನಂತೆ ಓದುವವರು ಮಾತ್ರ.

**ವಿಕ್ರಮ.**—ನನ್ನಂತೆ ಓದುವುದೆಂದರೇನು?

**ಶಾರ್ದೂಲ.**—ಯಾರೂ ಇಲ್ಲದಿರುವಾಗ ಆಕಾಶವನ್ನು ನೋಡುತ್ತಾ ಮಾತಾಡುವುದು, ತಾಯಿಯೋ ತಂದೆಯೋ ಬಳಿಯಲ್ಲಿದ್ದರೆ, ಒಂದು ಹರುಕು ಪುಸ್ತಕವನ್ನಾದರೂ ಕೈಯಲ್ಲಿ ಹಿಡಿದು ಮನಸ್ಸನ್ನು ಎಲ್ಲಿಗೋ ಕಳುಹಿಸಿ, ಪುಟಗಳನ್ನು ಮಗುಚಿಬಿಡುವುದು. ರಸಾವೇಶವು ಹೆಚ್ಚುವ ಮೊದಲು ಪಂಕ್ತಿಗೊಂದು ನಿಟ್ಟುಸಿರು; ಮತ್ತೆ ಅಕ್ಷರಕ್ಕೊಂದು ದೀರ್ಘ ಶ್ವಾಸ. ನೀನು ಓದುವ ಗ್ರಂಥವು ಕೆಟ್ಟದು, ವಿಕ್ರಮ, ಅದು ಯಾವಾಗಲೂ ಅಳಿಸುತ್ತದೆ; ಒಮ್ಮೆಯೂ ನಗಿಸುವುದಿಲ್ಲ.

**ವಿಕ್ರಮ.**—ನಗಿಸುವ ಗ್ರಂಥವೆಂದರೆ ನೀನೆ (ನಗುವನು.)

**ಶಾರ್ದೂಲ.**—ಹಾಗಾದರೆ, ನನ್ನ ಊಹೆ ಸರಿಯೆಂದಾಯಿತು.

**ವಿಕ್ರಮ.**—ನಿನ್ನ ಊಹೆಯು ಕೈ ಬಲು ಉದ್ದ; ಅದಕ್ಕೆ ನಿಲುಕದ ಸ್ಥಳವಿಲ್ಲ.

**ಶಾರ್ದೂಲ.**—ಆದುದರಿಂದಲೇ ನಿನಗಾಗಿ ವ್ಯಸನಪಡುತ್ತೇನೆ.

**ವಿಕ್ರಮ.**—ವ್ಯಸನಪಡುವುದಕ್ಕೇನಿದೆ?

**ಶಾರ್ದೂಲ.**—ಇರಬೇಕಾದುದೆಲ್ಲಾ ಇದೆ.

**ವಿಕ್ರಮ.**—ಹಾಗಾದರೆ, ಬೇಕಾದಷ್ಟು ವ್ಯಸನಪಡು!

**ಶಾರ್ದೂಲ.**—ಕೊಂಕು ಮಾತಿನಿಂದ ಏನೂ ಪ್ರಯೋಜನವಿಲ್ಲ. ಒಂದೊಂದು ಅವಸ್ಥೆಯಲ್ಲಿ ಒಂದೊಂದು ವಿಶೇಷವು ಕಾಣಲೇಬೇಕು. ಹಾಗಿಲ್ಲದಿದ್ದರೆ, ಕನಿಕರ ಪಡಲೇಬೇಕು.

**ವಿಕ್ರಮ.**— ನಿನಗೆ ಸಂಪೂರ್ಣ ಸ್ವಾತಂತ್ರ್ಯ ಈ ವಿಷಯದಲ್ಲಿ !

**ಶಾರ್ದೂಲ.**— ಸುಗ್ಗಿ ಈಗ ತಾನೆ ಬಂದಿದೆ. ಚಿಗುರು ನಗುತ್ತಿದೆ. ಕೋಗಿಲೆ ಹಾಡುತ್ತಿದೆ. ಪದ್ಮವೊಂದು ತನ್ನ ಪ್ರೇಮಸೌರಭವನ್ನು ಎದೆಯಲ್ಲಿ ತುಂಬಿಟ್ಟು ಕಿರುನಗೆಯನ್ನು ಬೀರುತ್ತಿದೆ.

**ವಿಕ್ರಮ.**— ಈ ಮಧ್ಯದಲ್ಲಿ ಕಾಳಿದಾಸ ಮಹಾಕವಿ ಸತ್ತ.

**ಶಾರ್ದೂಲ.**— ಆಗ ಉಲ್ಲಾಸದಿಂದ ಬೀಸುವ ಮಂದ ಮಾರುತನು ಇಲ್ಲದಿದ್ದರೆ ಹೇಗೆ?

**ವಿಕ್ರಮ.**— ಕಾಳಿದಾಸನಿಗೆ ವರ್ಣನಾವಸ್ತು ಎಲ್ಲಿಂದ ದೊರಕಬೇಕು?

**ಶಾರ್ದೂಲ.**— ಆಮೋದ ಪ್ರಮೋದಗಳಿಂದ ಲತೆಯನ್ನು ಆಲಿಂಗಿಸುತ್ತ, ಚಿಗುರನ್ನು ಚುಂಬಿಸುತ್ತ, ಮುಗ್ಧೆಯ ಕೆನ್ನೆಯನ್ನು ಹೊಡೆದೋಡಬೇಕಾಗಿರುವ ಗಂಧವಾಹನು, ಕುಂಟನಂತೆ ಮೂಲೆಯಲ್ಲಿ ಕುಳಿತರೆ ಸುಗ್ಗಿ ಸುಗ್ಗಿಯಾಗುವುದೆ?

**ವಿಕ್ರಮ.**— ಹಾಳಾಯಿತು ಶಾರ್ದೂಲ, ಸುಗ್ಗಿ !

**ಶಾರ್ದೂಲ.**— ಇದು ವ್ಯಥಿತ ಹೃದಯದ ಉದ್ಗಾರ.

**ವಿಕ್ರಮ.**— ಹೌದು; ಹೃದಯಕ್ಕೆ ವ್ಯಥೆಯಾಗಿದೆ.

**ಶಾರ್ದೂಲ.**— ಅದಕ್ಕೆ ಕಾರಣವೇನೆಂದು ನಾನು ಕೇಳುತ್ತೇನೆ.

**ವಿಕ್ರಮ.**— ನೀನು ಕೇಳಬಹುದು. ಆದರೆ ಉತ್ತರವನ್ನು ಕೊಡುವುದು ಯಾರು ? ಹೃದಯವನ್ನೇ ಕೇಳು.

**ಶಾರ್ದೂಲ.**— ಹಾಗೆಂದರೆ ಸರಿಯಲ್ಲ. ನನ್ನೊಡನೆ ನಿನ್ನ ಸ್ಥಿತಿಯನ್ನು ಕೇಳುವ ಜನರುಂಟು.

**ವಿಕ್ರಮ.**— ಅಂಥವರಾರು?

**ಶಾರ್ದೂಲ.**— ಯಾರೂ ಇಲ್ಲವೆ? ಹುಟ್ಟಿದಂದಿನಿಂದ ನಾವು ಜೋಡು ಹಕ್ಕಿಗಳಂತೆ ಬಳೆದೆವು. ನಿನ್ನ ತಾಯಿ, ಅಲ್ಲ, ನನ್ನ ತಾಯಿ ಈ ಸುದ್ದಿಯನ್ನು ಹೇಳಿದಳು— ಕೆಲವು ದಿನಗಳ ಹಿಂದೆ ನೀನು ಬೇಟೆಗೆ ಹೋಗಿದ್ದೆಯಂತೆ. ರಾಜಕುಮಾರಿಯಾದ ಲೀಲಾವತಿಯೂ ಸಖಿ

ಸಮೇತಳಾಗಿ ವಿಹಾರಕ್ಕೆಂದು ವನದತ್ತ ಹೋಗಿದ್ದಳಂತೆ. ಆಕಸ್ಮಿಕವಾಗಿ ಯಾರೋ ಪಠಾಣರು ಲೀಲಾವತಿಯನ್ನು ಮುತ್ತಿದರಂತೆ. ಅವಳು ಚೀರಿ ಸ್ಮೃತಿತಪ್ಪಿ ಬಿದ್ದಳಂತೆ. ಪಠಾಣರು ಆ ಕೋಮಲೆಯನ್ನು ಕುದುರೆಯ ಮೇಲೇರಿಸಿ ಕೊಂಡುಹೋಗುತ್ತಿದ್ದಾಗ, ಹಸಿದ ಸಿಂಹನಂತೆ ನೀನು,— ಇದೇ ವಿಕ್ರಮ ಸಿಂಹ— ಅವರ ಮೇಲೆ ಬಿದ್ದು, ಅವರನ್ನು ನೆಲಕ್ಕೆ ಅಪ್ಪಳಿಸಿ, ರಾಜಕುಮಾರಿಯನ್ನು ಕಾಪಾಡಿದೆಯಂತೆ. ಅಂದಿನಿಂದ— ಹೇಳುತ್ತಾಳೆ ನಿನ್ನ ತಾಯಿ— ನಿನ್ನ ಮನಸ್ಸು ಕುಗ್ಗಿಹೋಗಿದೆಯಂತೆ. ನಿನಗೇನು ಸೋಂಕು ತಗಲಿದೆಯೋ ಹೇಳು!

**ವಿಕ್ರಮ.**— ಪ್ರಕೃತಿಧೀರರಿಗೆ ಸೋಂಕೇ ?

**ಶಾರ್ದೂಲ.**— ಒಮ್ಮೊಮ್ಮೆ ಪ್ರಕೃತಿಯೂ ಕೆಟ್ಟುಹೋಗುವುದಿಲ್ಲವೇ? ಅಧಿಕ ಸಂಖ್ಯೆಯ ಶತ್ರುಗಳನ್ನು ನೋಡಿ ನಿನ್ನ ಮನಸ್ಸು ಬೆಚ್ಚಿರಬಹುದು.

**ವಿಕ್ರಮ.**— ಮೂರ್ಖ! ನಗೆಯಿಂದ ನಲಿದಾಡಿ ಮೃತ್ಯುಮುಖ ವನ್ನು ಪ್ರವೇಶಿಸುವ ರಜಪೂತಸಿಂಹಗಳು ಶ್ವಾನದಂತಹ ಪಠಾಣರಿಗೆ ಹೆದರು ತ್ತಾರೆಯೆ?

**ಶಾರ್ದೂಲ.**— ಶ್ವಾನವೊಂದಕ್ಕೆ ಹೆದರುವುದಿಲ್ಲ. ಆದರೆ ಬಹು ಸಂಖ್ಯೆಗೆ?

**ವಿಕ್ರಮ.**— ಅವು ಅಬ್ಬರಿಸಿ ಬೊಗಳತೊಡಗಿದರೆ, ಡೊಣ್ಣೆಯಿಂದ ಎರಡೇಟು ಕೊಟ್ಟರೆ ಸರಿ. ಅದೇ ಅವುಗಳಿಗೆ ಬಹುಮಾನ ಮತ್ತು ಪ್ರತೀ ಕಾರ.

**ಶಾರ್ದೂಲ.**— ಹಾಗಾದರೆ, ಕಾರಣವು ಬೇರೆ ಎಂದಾಯಿತು. ವಿಕ್ರಮಸಿಂಹನ ಖೇದಕ್ಕೂ ವಿಕ್ರಮಯೋಗ್ಯವಾದ ಕಾರಣವಿರಬೇಕು.

**ವಿಕ್ರಮ** (ನಸುನಗುತ್ತಾ).— ಶಾರ್ದೂಲ! ನಿನ್ನ ಸ್ವಭಾವವನ್ನು ಓದಿ ಓದಿ ಬಾಯಿಪಾಠ ಮಾಡಿದವನು ನಾನು!

**ಶಾರ್ದೂಲ.**— ಹಾಗಾದರೆ ಬಾಯಿಬಿಟ್ಟು ಹೇಳಿ ಬಿಡು.

**ವಿಕ್ರಮ.**— ನಿನಗೆ ಸುದ್ದಿ ಕೇಳುವುದೊಂದು ಹುಚ್ಚು

**ಶಾರ್ದೂಲ.**— ನನಗೆ ಈ ಹುಚ್ಚು, ನಿನಗೆ. . . ?

**ವಿಕ್ರಮ.** -- ಮಧುಶೋಧಕರು ಒಂದು ಜೇನುನೊಣವನ್ನು ಕಂಡರೆ ಸರಿ; ಅದು ಝೇಂಕರಿಸಿ ಹಾರಿದ್ದಲ್ಲಿ ಹಾರುವರು; ನಿಂತಲ್ಲಿ ನಿಲ್ಲುವರು. ಯಾಕೆ? ಕೊನೆಗೆ ಜೇನುಹುಟ್ಟು ದೊರೆವುದೆಂದು ಅವರಿಗೆ ಗೊತ್ತೇ ಇದೆ. ದೊರೆತೊಡನೆ ಅದನ್ನು ಹಿಂಡಿಹಿಳಿದು ಜೇನನ್ನು ಅಪಹರಿಸುವರು. ವಾರ್ತಾ ಸಂಗ್ರಹಣದಲ್ಲಿ ನಿನಗೆ ಅಷ್ಟು ಕುತೂಹಲ.

**ಶಾರ್ದೂಲ.** — ಹೌದು ಜೇನೆಲ್ಲಿದೆ? ನಾಲಗೆಯಿಂದ ನೀರು ಸುರಿಯುತ್ತಿದೆ.

**ವಿಕ್ರಮ.** — ಈ ವಾರ್ತೆಯು ಮಾತ್ರ ಮಧುಮಯವಾಗಿಲ್ಲ.

**ಶಾರ್ದೂಲ.** — ಅದು ಸವಿದ ಮೇಲೆ ಗೊತ್ತಾಗಬೇಕು.

**ವಿಕ್ರಮ.** — ಇದನ್ನು ಕೇಳಿ ಮಾಡುವುದೇನು, ಶಾರ್ದೂಲ ? ನೆಲದ ಮೇಲಿರುವ ಒಂದು ಕಾಡು ಹೂವು ಆಕಾಶದ ನಕ್ಷತ್ರವನ್ನು ಬಯಸಿದರೆ ?

**ಶಾರ್ದೂಲ.** — ಹುಂ; ಸ್ತ್ರೀವಿಷಯ. ಸರಿ; ಸಣ್ಣ ಪ್ರಾಯದಲ್ಲಿ ಎಲ್ಲರಿಗೂ ಬರುವ ವ್ಯಸನವೇ ಇದು.

**ವಿಕ್ರಮ.** — ಸ್ತ್ರೀಯರ ಸೌಂದರ್ಯ, ಅವರ ಸದ್ಗುಣ, ಅವರ ಶಾಲೀನತೆ, ಇವುಗಳನ್ನು ತಿಳಿಯಬೇಕಾದರೂ ಹೃದಯವಿಕಾಸವಾಗಬೇಕು. ಅದು ಒಂದು ಸಮಯದಲ್ಲಿ ಆಗುತ್ತದೆ.

**ಶಾರ್ದೂಲ.** — ಸರಿ, ಯಾರೋ ಒಬ್ಬ ನಾರಿಯ ಒಯ್ಯಾರಕ್ಕೆ ಮರುಳಾಗಿ ಬೆಪ್ಪನಂತಿರುವುದಕ್ಕೂ ಹೃದಯವಿಕಾಸವಾಗಬೇಕು. ಆ ಕಾಲ ಬಂದಿದೆಯೆಂಪೇ ಭಾವಿಸೋಣ.

**ವಿಕ್ರಮ.** — ಪ್ರಕೃತಿಯಲ್ಲಿ ಹಲವು ಬಗೆಯ ಸೊಬಗುಗಳು ನಿಗೂಢವಾಗಿವೆ. ಅವು ಎಲ್ಲರಿಗೂ ಪ್ರಕಾಶಿತವಾಗುವುದಿಲ್ಲ; ಯಾವಾಗಲೂ ಆಗುವುದಿಲ್ಲ. ಕೆಲವರಿಗೆ ಮಾತ್ರ ನಿಯಮಿತ ಸಮಯಕ್ಕೆ ಇಂತಹ ಸೌಂದರ್ಯವನ್ನು ನೋಡುವ ದಿವ್ಯದೃಷ್ಟಿ ಬರುತ್ತದೆ.

**ಶಾರ್ದೂಲ.** — ಹೌದು; ಇಂತಹ ದೃಷ್ಟಿ ದಿವ್ಯವಲ್ಲದಿದ್ದರೆ ಮತ್ತಾವುದು? ಇದಕ್ಕೆ ಗೋಚರಿಸಿದುದು ಅದೇ ಮೋಹಿನೀರೂಪವಲ್ಲವೇ ?

**ವಿಕ್ರಮ.** — ಅದನ್ನು ಕೇಳುವುದೇಕೆ?

**ಶಾರ್ದೂಲ.**—ನೀನು ಹೇಳಲೇ ಬೇಕೆಂದು.

**ವಿಕ್ರಮ.**—ಹೇಳಲು ನಾಲಗೆ ಬರುವುದಿಲ್ಲ, ಶಾರ್ದೂಲ! ನಾವು ಉಂಡವರು; ಅವನು ಇಕ್ಕಿದವನು!

**ಶಾರ್ದೂಲ.**—ನನ್ನ ಊಹೆಯು ಕೈ ಉದ್ದವೆಂಬುದು ನಿಜ; ನಿನ್ನ ಹೃದಯ ರಹಸ್ಯವು ಆಗಲೆ ನಿಲುಕಿದ್ದಿತು ಅದಕ್ಕೆ. ಇಕ್ಕಿದವನು ಪರ್ವತ ಸಿಂಗ; ನಿನ್ನ ದಿವ್ಯದೃಷ್ಟಿಗೆ ದಿವ್ಯ ಸೌಂದರ್ಯ ಪ್ರಕಾಶವನ್ನು ಬೀರಿದವಳು ಕುಮಾರಿ ಲೀಲಾವತಿ ಆತನ ಮಗಳು, ಅಲ್ಲವೇ ?

**ವಿಕ್ರಮ.**—ಇದಕ್ಕೆ ವಾಕ್ಪ್ರಮಾಣ ಬೇಕೇ?

**ಶಾರ್ದೂಲ.**—ಲೀಲಾವತಿ! ಅವಳೇ ಮೋಹಿನಿ!

**ವಿಕ್ರಮ.**—ಯಾವ ಹೆಸರನ್ನು ಬೇಕಾದರೂ ಕೊಡು; ಅವಳನ್ನು ಹಿಂದೆ ಎಷ್ಟೋ ಬಾರಿ ಕಂಡುದುಂಟು; ಆದರೆ ಹೃದಯವು ಮಾತ್ರ ನನ್ನಲ್ಲೇ ಇತ್ತು. ಅಂದು, ಲೀಲಾವತಿಯನ್ನು ಪಠಾಣರ ಬಾಧೆಯಿಂದ ತಪ್ಪಿಸಿದ ದಿನ ನನ್ನ ಎದೆ ಎಲ್ಲಿ ಹೋಯಿತೋ ತಿಳಿಯಲಿಲ್ಲ. ಮುಳ್ಳ ಮೊನೆಗೆ ಸಿಲುಕಿದ ಬಟ್ಟೆಯ ಅಂಚಿನಂತೆ, ಮನಸ್ಸು ಅವಳಲ್ಲೇ ನೆಟ್ಟಿದೆಯೆಂಬ ಬೋಧೆ ಈಗ ಆಗುತ್ತಿದೆ.

**ಶಾರ್ದೂಲ.**—ಬರಿಯ ಮೋಹದಿಂದ ಪ್ರಯೋಜನವಿಲ್ಲ. ಅದು ಹಿಂಗಾರಿನ ಮೋಡದಂತೆ ಶಬ್ದ ಮಾಡೀತು; ಮಳೆ ಸುರಿಸುವಂತಿಲ್ಲ

**ವಿಕ್ರಮ.**—ನನ್ನ ಆಶೆ ವಿಫಲವೇ ಆಗಬಹುದು. ಆದರೂ ಆಶೆಯು ಸುಖಾನುಭವವನ್ನು ಕೊಡುತ್ತದೆ.

**ಶಾರ್ದೂಲ.**—ಆಶಾವಸ್ತು ಕಣ್ಣೆದಿರಲ್ಲಿ ನಿಂತಿರುವ ವರೆಗೆ ಸುಖ, ಮತ್ತೆ?

**ವಿಕ್ರಮ.**—ಮತ್ತೆ ಅರ್ಧ ಸುಖ, ಅರ್ಧ ದುಃಖ.

**ಶಾರ್ದೂಲ.**—ಅದು ಹೇಗೆ?

**ವಿಕ್ರಮ.**—ಹೃದಯದಲ್ಲಿ ಬಿಂಬಿತವಾದ ವಸ್ತು ಅಲ್ಪ ವಸ್ತುವಲ್ಲ, ಸೃಷ್ಟಿಯ ಸುಂದರ ವಸ್ತು ಎಂಬುದರ ನೆನಪು ಆದಾಗ ಸುಖವೇ ಆಗಬೇಕು;

ವಸ್ತು ದೊರಕದೆ ಅದರ ಪ್ರತಿಬಿಂಬ ಮಾತ್ರ ಹೃದಯದಲ್ಲಿ ಪ್ರತಿಫಲಿಸಿ ದುದು ಎಂಬ ಸ್ಮರಣೆಯಿಂದ ವೇದನೆಯಾಗುವುದು.

**ಶಾರ್ದೂಲ.**—ಎರಡನೆಯದರಿಂದ ಹೆಚ್ಚು ಕಷ್ಟನಾಗಬಹುದು.

**ವಿಕ್ರಮ.**—ಇಲ್ಲ, ಶಾರ್ದೂಲ! ಅವುಗಳೆರಡರ ಬೆರಕೆಯ ಅನು ಭವದಲ್ಲಿ ಒಂದು ಬಗೆಯ ಸ್ವಾರಸ್ಯವಿರಬಹುದು.

**ಶಾರ್ದೂಲ.**—ಹಾಗಾದರೆ, ಲೀಲಾವತಿಯ ವಿಷಯದಲ್ಲಿ ಎಂದರೆ, ಅವಳ ಪ್ರಾಪ್ತಿಯ ವಿಷಯದಲ್ಲಿ ನಿನಗೆ ನಿರಾಶೆಯೋ ?

**ವಿಕ್ರಮ.**—ಆಶೆಯೋ ನಿರಾಶೆಯೋ ಹೇಳುವುದು ಹೇಗೆ? ಆಶೆಯ ಬಳ್ಳಿ, ಸಂದೇಹದ ಮೊಗ್ಗು.

**ಶಾರ್ದೂಲ.**—ಸಂದೇಹವು ಏತರಿಂದ?

**ವಿಕ್ರಮ.**—ಮೊದಲೇ ಕೊಟ್ಟೆನಲ್ಲಾ ಕಾರಣವನ್ನು !

**ಶಾರ್ದೂಲ.**—ಪರ್ವತಸಿಂಹನಂತಹ ಉದಾತ್ತಚರಿತನೂ ಇಂತಹ ಸಣ್ಣ ಭಾವನೆಗಳಿಗೆ ಎಡೆಗೊಟ್ಟಾನೇ ?

**ವಿಕ್ರಮ.**—ಕುಲಾಭಿಮಾನವು ಅಲ್ಪಭಾವನೆಯೆಂದು ದೊಡ್ಡವರು ಬಗೆಯುವುದಿಲ್ಲ.

**ಶಾರ್ದೂಲ.**—ನಿನ್ನ ಉದ್ದೇಶಸಿದ್ಧಿಗೆ ಇದೊಂದು ವಿಘ್ನವೆಂದು ನನ್ನ ಎಣಿಕೆಯಾಗಿಲ್ಲ.

**ವಿಕ್ರಮ.**—ಹಾಗಾದರೆ ?

**ಶಾರ್ದೂಲ.**—ನಿನಗೆ ಊಹಿಸಲು ಸಾಧ್ಯವಿಲ್ಲವೇ ?

**ವಿಕ್ರಮ.**—ಇಲ್ಲ.

**ಶಾರ್ದೂಲ.**—ಇಲ್ಲಿ ಬರುತ್ತದೆ ಹೃದಯದ್ರಾವಕ ಪ್ರಸಂಗ.

**ವಿಕ್ರಮ.**—ಅದೇನು ?

**ಶಾರ್ದೂಲ.**—ರಜಪೂತ ಕುಲಕ್ಕೆ ಲಜ್ಜಾಸ್ಪದವಾದ ಕಥೆ !

**ವಿಕ್ರಮ.**—ಯಾವುದದು?

**ಶಾರ್ದೂಲ.**—ನಮ್ಮ ಹೀನ ಸ್ಥಿತಿ! ನಮ್ಮ ಪಾರತಂತ್ರ್ಯ !

**ವಿಕ್ರಮ.**—ದಾಸ್ಯವೆಂದಿದ್ದರೆ ಅದು ಈ ಜಡ ದೇಹವನ್ನು ಬಾಧಿಸುವುದು; ಆದರೆ ಅಂತರಾತ್ಮನನ್ನು?

**ಶಾರ್ದೂಲ.**—ಜಡದೇಹದ ಸಂವೇದನೆಯೇ ಆತ್ಮದಲ್ಲಿ ಪ್ರತಿಧ್ವನಿಸುವುದು.

**ವಿಕ್ರಮ.**—ಎಲ್ಲರ ಆತ್ಮದಲ್ಲಿಯೂ ಹಾಗೆ ಆಗುವುದಿಲ್ಲ.

**ಶಾರ್ದೂಲ.**—ದೇಹವು ತನ್ನನ್ನು ತಾನೆ ವಿಕ್ರಯಮಾಡುವುದಿಲ್ಲ. ಅದನ್ನು ಆತ್ಮವೇ ಮಾರುತ್ತದೆ. ದೇಹದ ಮೇಲೆ ಎಂದು ಪಾರತಂತ್ರ್ಯ ಶೃಂಖಲೆಯು ಗೊಣಸು ಬೀಳುವುದೋ ಅಂದೇ ಆತ್ಮವೂ ವಿಕ್ರೀತವಾಗುವುದು.

**ವಿಕ್ರಮ.**—ಇದನ್ನು ಯಾವುದರಿಂದ ತಿಳಿಯಬೇಕು?

**ಶಾರ್ದೂಲ.**—ಆಚಾರದಿಂದ

**ವಿಕ್ರಮ.**—ರಜಪೂತರ ಆಚಾರದಲ್ಲಿ ಯಾವ ದಾಸ್ಯಲಕ್ಷಣವಿದೆ?

**ಶಾರ್ದೂಲ.**—ಯಾವ ಲಕ್ಷಣವಿಲ್ಲ? ಎಂತಹ ಗುಲಾಮರಿಗೂ ಸಾಂಸಾರಿಕ ವ್ಯಾಪಾರಗಳಲ್ಲಿ ಸ್ವಾತಂತ್ರ್ಯವಿರುವುದು; ನಮಗೆ ಅದೂ ಇಲ್ಲ.

**ವಿಕ್ರಮ.**—ಇದನ್ನು ಯಾವುದರಿಂದ ತಿಳಿದೆ ನೀನು?

**ಶಾರ್ದೂಲ.**—ಬುದ್ಧಿ ಶಕ್ತಿಯಿರುವವರಿಗೆ ಇದು ತಿಳಿಯಲೇ ಬೇಕು.

**ವಿಕ್ರಮ.**—ನಾನು ಮೂಢನಾಗಿದ್ದೇನೆ. ವಿವರಿಸಿ ಹೇಳು.

**ಶಾರ್ದೂಲ.**—ನೋಡು, ನಮ್ಮ ದುರ್ಗಕ್ಕೆ ಪ್ರತಿಯಾಗಿ, ನೀಲವಾದ ಆಕಾಶದಲ್ಲಿ ಅರ್ಧಚಂದ್ರನೊಡನೆ ಸೆಣಸುತ್ತಿರುವ ಆ ಧ್ವಜವನ್ನು ನೋಡು.

**ವಿಕ್ರಮ.**—ಅಹಮ್ಮದ್‌ಶಹನ ಧ್ವಜವದು.

**ಶಾರ್ದೂಲ.**—ಸಂತೋಷದಿಂದ ನಗುತ್ತ ಹೇಳು!

**ವಿಕ್ರಮ** (ಸಿಟ್ಟಿನಿಂದ).—ಏನೆಂದೆ?

**ಶಾರ್ದೂಲ.**—ಹೇಳುವುದೇನನ್ನು ವಿಕ್ರಮ? ಅಹಮ್ಮದ್‌ಶಹನು ನಮ್ಮ ಆತ್ಮದ ಮೇಲೂ ವಿಜಯಧ್ವಜವನ್ನೂರಿದ್ದಾನೆ.

**ವಿಕ್ರಮ.**—ಎಂದೂ ಇಲ್ಲ.

**ಶಾರ್ದೂಲ.**—ಎಂದೂ ಈ ಸ್ಥಿತಿ ಇರಲಿಲ್ಲ; ಈಗ ಮಾತ್ರ ಇದೆ.

**ವಿಕ್ರಮ.**—ಅವನ ಸೇನಾಬಲವು ವಿಪುಲವಾಗಿರುವುದರಿಂದ, ನಮ್ಮದು ಅಲ್ಪವಾಗಿರುವುದರಿಂದ, ಈ ರೀತಿಯ ಬಾಹ್ಯಾಕ್ರಮಗಳನ್ನು ನಾವು ಸಹಿಸಿದ್ದಿರಬಹುದು.

**ಶಾರ್ದೂಲ.**—ಅಂತರಾತ್ಮವು ನಿರ್ಭೀತವಾಗಿದ್ದರೆ, ಇಂತಹ ಸಹನೆ, ಶವಗಳಿಗಿರುವಂತಹ ಸಹನೆ, ಬರುತ್ತಿರಲಿಲ್ಲ.

**ವಿಕ್ರಮ.**—ಅಸಹಿಷ್ಣುತ್ವವು ಇರುವ ಮಾತ್ರದಿಂದ ಯಾರನ್ನೂ ಸ್ವತಂತ್ರರೆನ್ನಲು ಸಾಧ್ಯವಿಲ್ಲ. ಸಂದರ್ಭಕ್ಕೆ ಅನುಗುಣವಾಗಿ ವ್ಯವಹಾರಗಳನ್ನು ನಡೆಯಿಸಬೇಕಾಗುತ್ತದೆ.

**ಶಾರ್ದೂಲ.**—ಇದು ನಮಗೆ ಸಾಯುವ ಸಂದರ್ಭ. ಬದುಕುವ ಸಂದರ್ಭವಲ್ಲ.

**ವಿಕ್ರಮ.**—ಕಾರಣವೇನು?

**ಶಾರ್ದೂಲ.**—ಇದಕ್ಕಿಂತ ಘೋರಕಾರಣವಾವುದು? ರಜಪೂತರಾಗಿ ಹುಟ್ಟಿದವರಲ್ಲಿ, ತಂದೆಯಾಗುವ ದುರ್ಭಾಗ್ಯಕ್ಕೆ ಪಕ್ಕಾದವನು ಮಗಳ ಮದುವೆಯನ್ನು ಮಾಡಬೇಕಾದರೆ, ಆ ಧ್ವಜವನ್ನು ಕೇಳಬೇಕು.

**ವಿಕ್ರಮ.**—ಧ್ವಜವು ಏನು ಮಾಡುತ್ತದೆ?

**ಶಾರ್ದೂಲ.**—ಕೇಳದಿದ್ದರೆ, ಹೊಯಿಗೆಯ ರಾಶಿಯನ್ನು ಒದೆದು ಚೆಲ್ಲುವಂತೆ, ರಜಪೂತಕುಲವನ್ನು ನುಚ್ಚು ಮಾಡುತ್ತದೆ.

**ವಿಕ್ರಮ.**—ಇದು ಸುಳ್ಳು !

**ಶಾರ್ದೂಲ.**—ರಾಜಪುತ್ರವಂಶದಲ್ಲಿ ಅರಳಿದ ಪ್ರಥಮ ಮುಕುಲವು ಅವನಿಗೆ ಕಾಣಿಕೆಯಾಗಿ ಸಲಬೇಕು; ಹಿಂದೂ ರಾಜರಲ್ಲಿ ಜನಿಸುವ ಪ್ರಥಮ ಕನ್ಯಾರತ್ನವು ಅವನ ಕಿರೀಟವನ್ನು ಅಲಂಕರಿಸಬೇಕು. ರಾಜಸ್ತ್ರೀಯರೆಂದೇನು? ಹೆಣ್ಣೆಂಬ ಹೆಸರಿರುವವಳು, ಪೂರ್ವಜನ್ಮದ ದುಷ್ಕೃತದಿಂದ ಸುಂದರಿಯಾಗಿ ಹುಟ್ಟಿದರೆ, ಅವಳಿಗೆ ಅಹಮ್ಮದ್‌ಶಹನ ಅಂತಃಪುರಯೋಗ !

**ವಿಕ್ರಮ.**—ಇದೂ ನಿಜವೇ?

**ಶಾರ್ದೂಲ.**—ಇದು ನಿಜವಲ್ಲದಿದ್ದರೆ ಈ ಲೋಕದಲ್ಲಿ ನಿಜವೆಂಬುದೇ ಇಲ್ಲ.

**ವಿಕ್ರಮ.**—ಇದನ್ನೇ ನೀನು ' ವಿಘ್ನ 'ವೆಂದುದು; ಅಲ್ಲವೇ?

**ಶಾರ್ದೂಲ.**—ಹೌದು.

**ವಿಕ್ರಮ.**—ಇತರ ರಜಪೂತರ ಸ್ಥಿತಿಯು ನೀನು ಬಣ್ಣಿಸಿದಂತೆ ಇರಬಹುದು.

**ಶಾರ್ದೂಲ.**—ಹುಂ.

**ವಿಕ್ರಮ.**—ಪರ್ವತಸಿಂಹನು ಪರತಂತ್ರನಾಗಿಲ್ಲ.

**ಶಾರ್ದೂಲ.**—ಸ್ವತಂತ್ರನೂ ಅಲ್ಲ.

**ವಿಕ್ರಮ.**—ಅವನ ಮೇಲೆ ಕೈಮಾಡಲು ಶಹನಿಗೆ ಧೈರ್ಯವಿಲ್ಲ

**ಶಾರ್ದೂಲ.**—ಧೈರ್ಯವಿದ್ದರೂ ಇದುವರೆಗೆ ಲಾಭವಿರಲಿಲ್ಲ.

**ವಿಕ್ರಮ.**—ಇನ್ನು ಮುಂದೆ. . . . .

**ಶಾರ್ದೂಲ.**—ನೀನೇ ನೋಡಬಹುದು.

**ವಿಕ್ರಮ.**—ಲೀಲಾವತಿಯ ನಾಮೋಚ್ಚಾರಣ ಮಾಡಲೂ ಶಹನಿಗೆ ಧೈರ್ಯವಿಲ್ಲ.

**ಶಾರ್ದೂಲ.**—ಬೇರೆ ಸಂದರ್ಭಗಳಲ್ಲಿ ಎಷ್ಟೋ ಜನರು ಹೀಗೆಯೇ ವ್ಯರ್ಥವಾಗಿ ಆಡಿದ್ದಾರೆ.

**ವಿಕ್ರಮ.**—ರಾಜಪುತ್ರರಲ್ಲಿ ಎಷ್ಟೋ ಮಂದಿ ವೀರರು ಹುಟ್ಟಿರಬಹುದು, ಸತ್ತಿರಬಹುದು. ಆದರೆ ಪರ್ವತಸಿಂಹನಂತಹ ಸಿಂಹಗಳೆಷ್ಟು ಹುಟ್ಟಿವೆ?

**ಶಾರ್ದೂಲ.**—ಲೆಕ್ಕವಿಲ್ಲದಷ್ಟು.

**ವಿಕ್ರಮ.**—ಎಷ್ಟು ಮಂದಿಗೆ ವಿಕ್ರಮಸಿಂಹನಂತಹ ಸಂಧಿವಿಗ್ರಹಿಗಳಿದ್ದರು?

**ಶಾರ್ದೂಲ.**—ತಾವು ಹುಟ್ಟದೆ ಲೋಕ ಕೆಟ್ಟಿತೆಂದು ಹೇಳುವುದು ಅಹಂಕಾರಿಗಳ ಸ್ವಭಾವ.

**ವಿಕ್ರಮ** (ಖಡ್ಗವನ್ನು ಜಳಪಿಸಿ).—ಎಷ್ಟು ಮುಂದಿಗೆ ವೀರಶ್ರೀಯು ಕಾರಾಗೃಹದಂತಿರುವ ಈ ಖಡ್ಗವಿತ್ತು?

**ಶಾರ್ದೂಲ.**—ಯಾರ ಊರಲ್ಲಿ ಕುಮ್ಮಾರರಿದ್ದರೋ ಅವರೆಲ್ಲರಿಗೂ!

**ವಿಕ್ರಮ.**—ಇದು ನಿನ್ನ ಅಪಹಾಸ್ಯ, ಶಾರ್ದೂಲ!

**ಶಾರ್ದೂಲ.**—ಹೀಗಿರುವುದು ನನಗೆ ಮಾತ್ರವಲ್ಲ, ರಜಪೂತ ಲೋಕಕ್ಕೆ ಅಪಹಾಸ್ಯ.

**ವಿಕ್ರಮ.**—ಕೈಯಲ್ಲಿ ಈ ಖಡ್ಗ, ಭುಜದಲ್ಲಿ ಈ ಶಕ್ತಿ, ಇರುವ ವರೆಗೆ ಶಹನ ಮಾತನ್ನೆತ್ತಬೇಡ.

**ಶಾರ್ದೂಲ.**—ನಾನು ಮಾತೆತ್ತದೆ ಕುಳಿತೇನು. ಆದರೆ ಈ ನಿನ್ನ ಮುರುಕು ಕತ್ತಿಗೆ ಹೆದರಿ, ಶಹನು ಊರುಬಿಟ್ಟೋಡುವನೆಂದು ಭಾವಿಸಿರುವೆಯಾ?

**ವಿಕ್ರಮ.**—ಶಾರ್ದೂಲ! ನಿನ್ನ ವಿನೋದವು ಸಾಕು. ತಿಳಿದು ತಿಳಿದೂ ನನ್ನ ಪರಾಕ್ರಮವನ್ನು ಮೂದಲಿಸುವುದೇಕೆ? ನಾವು ಶಕ್ತಿವಂತರೆಂದು ನಿಷ್ಕಾರಣವಾಗಿ ಯುದ್ಧವನ್ನು ಆಹ್ವಾನಿಸುವುದೇ? ಸಂದರ್ಭ ಬರಲಿ, ಒಮ್ಮೆ ಶಹನೊಡನೆ ಕತ್ತಿ ಬೀಸುತ್ತೇನೆ. ಮತ್ತೆ ಯಾವುದಕ್ಕಲ್ಲದಿದ್ದರೂ, ನಿನ್ನ ಮನಸ್ತೃಪ್ತಿಗಾಗಿ, ನನ್ನದು ಗೊಡ್ಡು ದೇಹವಲ್ಲವೆಂದು ತೋರಿಸುವುದಕ್ಕಾಗಿ, ಯುದ್ಧ ಮಾಡಬೇಕೆಂಬ ಬಯಕೆಯಾಗುತ್ತದೆ. ಈ ಆಲಸ್ಯ ಸಾಕು. ರಕ್ತವು ಮಂಜುಗಡ್ಡೆಯಾಗಿದೆ. ಸಂದರ್ಭ ಬರಲಿ! ಅದಕ್ಕೆ ಎಂತಹ ಅಲ್ಪ ಕಾರಣವಿದ್ದರೂ ಚಿಂತೆಯಿಲ್ಲ. ಸಂದರ್ಭ ಬರಬೇಕು!. . . . ಸಂದರ್ಭ . . . !

[ಅಷ್ಟರಲ್ಲಿ ದಾಸಿಯೊಬ್ಬಳು ಪ್ರವೇಶಿಸುವಳು.]

**ದಾಸಿ.**—ರಾಜಾಸ್ಥಾನದಿಂದ ದೂತನೊಬ್ಬನು ಬಂದು ವಿಕ್ರಮಸಿಂಹನನ್ನು ಕೇಳುತ್ತಿದ್ದಾನೆ.

**ವಿಕ್ರಮ.**—ಶಾರ್ದೂಲ! ಯಾವುದಕ್ಕೂ ಸಂದರ್ಭ ಬರಬೇಕಲ್ಲವೇ? ಇಂದು ಹೇಗೂ ಸಂಜೆಯಾಯಿತು.

**ಶಾರ್ದೂಲ.**—ಇಂದಿನ ದಿನ ಕಳೆದು ಹೋದರೂ, ಇನ್ನೂ ಕೆಲವರ್ಷ ಬದುಕುವ ಆಸೆಯಿದೆಯಷ್ಟೆ?

**ವಿಕ್ರಮ.**—ಮುಂದೆ ದಿನಗಳೂ ಉಂಟು, ಮಾಡುವ ಕಾರ್ಯಗಳೂ ಉಂಟು.

**ಶಾರ್ದೂಲ.**—ಆದರೆ, ಸಂದರ್ಭವು ಕಣ್ಮರೆಯಾದರೆ?

**ವಿಕ್ರಮ.**—ನೀನೇ ಹೇಳುವುದುಂಟು 'ವಿಕ್ರಮಸಿಂಹನ ಮಾತು ಹೊಳ್ಳಲ್ಲ; ಫಲವತ್ತಾದ ಭೂಮಿಗೆ ಬಿದ್ದ ಬೀಜದಂತೆ ಅವನ ಪ್ರತಿಜ್ಞೆ ನಿರೀಕ್ಷಿಸಿದುದಕ್ಕಿಂತ ಅಧಿಕ ಫಲ ಕೊಡುವುದು.' ಎಂದು! ಇಂದು ನಡೆ; ನಾಳೆ ನೋಡೋಣ!

**ಶಾರ್ದೂಲ.**—ಅವಶ್ಯವಾಗಿ. [ವಿಕ್ರಮಸಿಂಹನ ನಿಷ್ಕ್ರಮಣ]. ನಮ್ಮ ವಿಕ್ರಮಸಿಂಹನೆಂದರೆ ಸೃಷ್ಟಿಯಲ್ಲಿ ಅತ್ಯಪೂರ್ವವಾದೊಂದು ವ್ಯಕ್ತಿ! ಒಂದು ವಿಷಯವು ತಲೆಗೆ ಅಡರಿತೆಂದರೆ ಅದು ಬಿಟ್ಟು ಹೋಗುವುದು ಪ್ರಲಯ ಕಾಲದಲ್ಲಿ. ಇನ್ನೊಂದು ಗುಣ ಈತನದು:—ಇವನ ಅಭಿಪ್ರಾಯಕ್ಕೆ ಎಲ್ಲರೂ ತಲೆದೂಗಲೇಬೇಕು. ಏಕಗ್ರಾಹಿಗಳ ಸ್ವಭಾವವೇ ಹೀಗಲ್ಲವೆ? ವಿಕ್ರಮನಿಗೆ ಕಾರ್ಯಶಕ್ತಿಯುಂಟೆಂಬದನ್ನು ಬಲ್ಲೆ. ಆದರೆ ಜೀನನ ಪೆಟ್ಟಿಗೆ ಗಂಟಿನಂತೆ ಅದು ಬಡ್ಡಿಗೆ ಹೋಗದೆ ಅಭಿವೃದ್ಧಿ ಹೊಂದುವಂತಿಲ್ಲ. ಬಡ್ಡಿಗೆ ಹೋಗುವ ಸಂದರ್ಭವೂ ಇಲ್ಲ. 'ಹೊರಡಲಿ ಒಮ್ಮೆ ಇವನ ವೀರರಸ!' ಎಂದು ಈತನ ಹೃದಯಕುಂಭವನ್ನು ಕುಲುಕಿಸಿ ಬಿಟ್ಟೆ. ಮಾತು ಚೆಲ್ಲಿತು; ಸದ್ಯಕ್ಕೆ ಇಷ್ಟೇ ಸಾಕು.

---

## ದೃಶ್ಯ ೨

[ಶಯ್ಯಾಗೃಹ; ಲೀಲಾವತಿ ಹಾಸಿಗೆಯ ಮೇಲೆ ಕುಳಿತಿರುವಳು; ಇಂದಿರಾದೇವಿ ಬಳಿಯ ಮಂಚದಲ್ಲಿರುವಳು].

**ಇಂದಿರಾ.** — ಈಗಲಾದರೂ ದೇಹಕ್ಕೆ ಸ್ವಲ್ಪ ಸುಖವಾಗಿದೆಯೊ ಮಗಳೆ?

**ಲೀಲಾ.** — ಹುಂ.

**ಇಂದಿರಾ.** — ತಂದೆ ನಿಮಿಷ ನಿಮಿಷ ಕೇಳುತ್ತಾರೆ 'ನಮ್ಮ ಲೀಲೆ ಹೇಗಿದ್ದಾಳೆ?' ಎಂದು. ಪ್ರತಿ ನಿಮಿಷದಲ್ಲಿಯೂ 'ಮತ್ತೂ ಗುಣವಿದೆ' ಎಂಬ ಮಾತನ್ನು ಕೇಳುವ ಕುತೂಹಲ ಅವರಿಗೆ. ಆಪತ್ತುಗಳನ್ನು ತರುವುದೂ ದೇವರು; ದೂರೀಕರಿಸುವುದೂ ದೇವರು. ನಾವು ಹೇಳಿದಂತೆ ಗುಣವಾಗುವುದಿದ್ದರೆ ಇಷ್ಟೆಲ್ಲಾ ಕಷ್ಟವಿತ್ತೇ?

**ಲೀಲಾ.** — ತಾಯೆ! ತಂದೆಯೊಡನೆ ಹೀಗೆ ಹೇಳು:—'ಲೀಲೆಗೆ ರೋಗವು ಸಂಪೂರ್ಣ ಗುಣವಾಗಿದೆ. ಆದರೆ ದೇಹದಲ್ಲೇನೋ ಸ್ವಲ್ಪ ಅಶಕ್ತಿ. ಅದು ಹೋದರೆ ಮೊದಲಿನ ಲೀಲೆಯೆ!'

**ಇಂದಿರಾ.** — ಹಾಗೆಯೇ ಹೇಳುತ್ತೇನೆ. (ಆಲೋಚನೆ ಮಾಡಿ) [ಆತ್ಮಗತ] ಈಗಲೇ ಕೇಳಿ ಬಿಡುತ್ತೇನೆ. (ಪ್ರಕಾಶ)....ಲೀಲೆ, ನಿನ್ನಲ್ಲಿ ಹೇಳುವುದುಂಟು.

**ಲೀಲಾ.** — ಅದೇನು ತಾಯಿ? ಉಂಟೆಂಬ ಪ್ರಸ್ತಾವನೆಯೇಕೆ? ಹೇಳಿಬಿಡು.

**ಇಂದಿರಾ.** — ಮತ್ತೇನೂ ಇಲ್ಲ; ನೀನು ಮನಸ್ಸಿಗೆ ಯಾವ ಚಿಂತೆಯನ್ನೂ ಹಚ್ಚಿಕೊಳ್ಳಬೇಡ...

**ಲೀಲಾ.** — ಇಂತಹ ಮಾತಿನಿಂದ ವ್ಯಸನವಾಗುತ್ತದೆ.

**ಇಂದಿರಾ.** — ವ್ಯಸನಕ್ಕೆ ಕಾರಣವಿಲ್ಲ ಲೀಲೆ. ಚಿಂತೆಯು ಬರುವ ದಾರಿಯನ್ನು ಕಂಡವರಿಲ್ಲ.

**ಲೀಲಾ.** — ಏಕೆ ಚಿಂತೆಯಾಗಬೇಕೆಂದು ನನಗೇನೋ ತಿಳಿಯುವುದೇ ಇಲ್ಲ. ನಾನು ಒಂದು ಕೇಳಿದರೆ ಹತ್ತು ದೊರೆಯುತ್ತದ. ಇದೊಂದು ಚಿಂತಾಸ್ಥಾನವೇ ಸರಿ.

**ಇಂದಿರಾ.** — ದೇಹಸುಖವನ್ನು ಪೋಷಿಸಬೇಕಾದರೆ, ದೊರೆಯದ ವಸ್ತುಗಳಿಲ್ಲ. ಆದರೆ ಮನಸ್ಸುಖಕ್ಕೆ ಅಷ್ಟು ಸುಲಭವಾಗಿ ಪೋಷಣೆ ದೊರೆಯುವುದಿಲ್ಲ.

**ಲೀಲಾ** (ಮುಖವು ಸ್ವಲ್ಪ ಕೆಂಪಾಗುವುದು.). — ಸರಿ.

**ಇಂದಿರಾ.** — ನಾನು ಹೇಳುವ ಅಭಿಪ್ರಾಯವೇನೆಂದರೆ, ಮೃಷ್ಟಾನ್ನವುಂಡರೆ, ದಿವ್ಯದುಕೂಲಗಳನ್ನುಟ್ಟರೆ, ಮಾತ್ರ ಚಿಂತೆ ತೊಲಗುವುದು ಎಂಬ ನಿಯಮವೇನೂ ಇಲ್ಲ.

**ಲೀಲಾ.** — ಹುಂ.

**ಇಂದಿರಾ.** — ಕೆಲಸಮಯದಲ್ಲಿ, ಹಿಂದೆ ಇಲ್ಲದಿದ್ದ ವಸ್ತುವಿನ ಅಭಾವವೇ ಚಿಂತಾಕಾರಣವಾಗುತ್ತದೆ.

**ಲೀಲಾ.** — ಆ ಸಮಯವು ಬರಬೇಕಷ್ಟು?

**ಇಂದಿರಾ.** — ನಿನಗೆ ಪ್ರಾಯವೇರುತ್ತಾ ಬಂತು ಮಗಳೆ!

**ಲೀಲೆ.** — ಇದೆಂತಹ ಮಾತು ತಾಯಿ!

**ಇಂದಿರಾ.** — ಇದರಲ್ಲಿ ಆಶ್ಚರ್ಯವೇನು? ವರ್ಷಹೋದಂತೆ ಪ್ರಾಯವೇರುತ್ತದೆ. ಆಗ ಎಳಹಗೆಯದಲ್ಲಿ ಸಂಗ್ರಹಿಸಿಟ್ಟ ಸುಖಸಾಮಗ್ರಿಗಳು ಸಾಕಾಗುವುದಿಲ್ಲ

**ಲೀಲೆ.** — ಅದರಿಂದೇನು?

**ಇಂದಿರಾ.** — ಹೆಂಗುಸರಿಗೆ ಬೇಕಾದುದೇನು ಮಗಳೆ, ಒಂದು ಜೀವರತ್ನ. ಇದನ್ನರಿಯದವಳು ನೀನಲ್ಲ.

**ಲೀಲೆ.** — (ಲಜ್ಜಾವನತ ಮುಖಿಯಾಗಿ ಹಾಸಿನ ಅಂಚನ್ನು ಮುಟಿಸುತ್ತಿರುವಳು.)

**ಇಂದಿರಾ.** — ವಯಸ್ಸು ಮೀರುತ್ತದೆ; ನಾವು ಬೇಡವೆಂದರೂ ಮೀರುತ್ತದೆ.

**ಲೀಲಾ.**--ನನಗೆ ವರ್ಷವಾಗಿರಬಹುದು, ಆದರೆ ವಯಸ್ಸಾಗಲಿಲ್ಲ.

**ಇಂದಿರಾ.**—ಹಾಗೆಂದರೆ ಅರ್ಥವೇನು? (ಎಂದು ಪನ್ನೆ ಎಂಬ ಹೆಸರಿನ ದಾದಿಯನ್ನು ಕರೆಯುವಳು. ದಾದಿ ಬಂದು ಮಂಚದ ಬಳಿಯಲ್ಲಿ ನಿಂತು ಅಪ್ಪಣೆಯೇನೆಂದು ಕೇಳುವಳು) ನಮ್ಮ ಲೀಲೆ ಹುಟ್ಟಿದ ತಿಂಗಳಾವುದು, ಪನ್ನೆ?

**ಪನ್ನೆ.**—ಹಾಗೆಲ್ಲಾ ಕೇಳಿದರೆ ಪನ್ನೆಗೇನು ಗೊತ್ತು? ಲೀಲೆ ಹುಟ್ಟಿದ ವರ್ಷ ಈಗಲೂ ನನಗೆ ಗೊತ್ತಿದೆ. ಎರಡನೆಯ ಮದುವೆ ನನಗೆ. ಇದೆ ಲೀಲೆಯಂಥ ಒಂದು ಹೆಣ್ಣು ಮಗು ನನಗೆ. (ಇಲ್ಲಿ ಧ್ವನಿ ನಡುಗುವುದು.) ಹೌದು; ಇವಳಂತೆಯೆ ದುಂಡಗೆ ಮುಖ. ಕಾಡಿಗೆಯಲ್ಲಿ ಗೆರೆಹಾಕಿದಂತೆ ಕರಿಯ ಹುಬ್ಬು. ಸ್ಫಟಿಕದಂತೆ ಹೊಳೆಯುವ ಕಣ್ಣು. ಅವಳು ನಕ್ಕಾಗ ನಗೆಯಿಂದ ಲೀಲೆಯೇ ಹೊರಟು ಬಂದಂತೆಯೂ ಲೀಲೆ ನಗುವಾಗ ಅವಳು ಹೊರಟು ಬಂದಂತೆಯೂ ಕಾಣಬೇಕೇ? ಆಕಾರ ಇಬ್ಬರದೂ ಒಂದೇ ತರ. ಆದರೆ ಬಣ್ಣದಲ್ಲಿ ಮಾತ್ರ ವ್ಯತ್ಯಾಸ. ಅವಳು ಎಣ್ಣೆ ಕಪ್ಪು; ತಂದೆಯ ನಾಜ. ನನ್ನ ಸ್ವಭಾವ ಬರುತ್ತಿದ್ದರೆ ಸ್ವಲ್ಪ ಬೆಳ್ಳಗಾಗುತ್ತಿದ್ದಳು. ಇವಳು ಹಾಲಿನಂತೆ ಬೆಳ್ಳಗೆ. ಸರಿ; ಏನು ಹೇಳಿದೆ ನಾನು? ನನ್ನ ಮಗಳ ವಿಷಯ. ಆಗ ಅವಳಿಗೆ ಮೂರು ವರ್ಷ. ಒಂದು ದಿನ ಹೊಲಕ್ಕೆ ಹೋಗಿದ್ದೆ. ಮನೆಯೊಳಗೆ ಒಂದೆ ಕೂಸು. ಬರುವಷ್ಟರಲ್ಲಿ ಆ ಹೊನ್ನಿ ಅಲ್ಲಿಲ್ಲ. ಮನೆಯೆಲ್ಲಾ ಹುಡುಕಿದೆ; ಮೂಲೆಯೆಲ್ಲಾ ಅರಸಿದೆ; ಕೂಗಿದೆ; ತಲೆ ಹೊಡೆದುಕೊಂಡೆ. ಆದರೆ ಊಹುಂ; ಹುಡುಗಿ ಇಲ್ಲ (ಅಳುವುದಕ್ಕೆ ಪ್ರಾರಂಭಿಸುವಳು.)

**ಇಂದಿರಾ.**—ಇದನ್ನು ಕೇಳಲಿಲ್ಲ ನಾನು.

**ಪನ್ನೆ.**—ಅಲ್ಲ ಮಹಾರಾಣಿಯವರೇ! ನೆನಪುಂಟು ನನಗೆ ನೀವು ಕೇಳಿದುದು, ಲೀಲೆ ಹುಟ್ಟಿದ ತಿಂಗಳನ್ನು. ಆದರೆ ನಾನೊಂದು ಪ್ರಶ್ನೆ ಮಾಡುತ್ತೇನೆ, ತಾಯಿ. ಹೆತ್ತ ತಾಯಿ ಮಗಳನ್ನು ಬೇಕೆಂದೇ ಹುಲಿ ಬಾಯಿಗೆ ಕೊಡುತ್ತಾಳೆಯೆ? ಒಂದು ವೇಳೆ ಹಾಗೆಯೇ ಆಯಿತೆಂದಾದರೆ, ಅದು ದೇವರ ಚಿತ್ತ ಎಂದು ಭಾವಿಸಬೇಕಲ್ಲದೆ ತಾಯಿ ಬೇಕೆಂದೇ ಮಾಡಿದಳು, ಎಂದು ಗದರಿಸಬಹುದೇ? ಮಕ್ಕಳ ವಿಷಯದಲ್ಲಿ ತಾಯಿಗೆ ಅಜಾ

ಗ್ರತೆ ಬರುವುದೇ ಇಲ್ಲ. ಬಂದರೆ ಅದು ದೇವರ ಪಿಕಲಾಟವೆಂದು ಭಾವಿಸ ಬೇಡವೇ ವಿಾಸೆಹೊತ್ತ ಗಂಡಂದಿರು? ಹೆಂಗುಸಿನ ಮನಸ್ಸು ಬೆಣ್ಣೆ, ಗಂಡುಸರ ಮನಸ್ಸು ಕರ್ಗಲ್ಲು. ಸರಿ! ನೀವು ಕೇಳಿದುದು ಲೀಲೆಯ ತಿಂಗಳನ್ನು! ಮುಗಿಸಿ ಬಿಡುತ್ತೇನೆ. ಮನೆಯುವರು ಬಂದರು; ಹುಡುಗಿ ಕಾಣೆ. ಅವರಿಗೆ ನನ್ನಲ್ಲೇ ಸಂಶಯ. ಹೊಡೆದರು, — ಬಡಿದರು. (ಇಲ್ಲಿ ಪನ್ನೆ ತನ್ನ ಬೆನ್ನ ಮೇಲಿದ್ದ ಗಾಯಗಳನ್ನು ತೋರಿಸುವಳು.)

**ಇಂದಿರಾ.** — ನಾನು ಕೇಳಿದುದಕ್ಕೆ ಉತ್ತರಕೊಡು, ಪನ್ನೆ

**ಪನ್ನೆ.** — ಹೌದು, ಕೊಡುತ್ತೇನೆ ಉತ್ತರ. (ಅಳುತ್ತಾ) ಸರಿ; ಅವರು ನನ್ನನ್ನು ಹೊಡೆದರು; ಬಡಿದರು; ಸಿಟ್ಟಿನಿಂದ ಹೊರಟೇ ಹೋದರು; ನುತ್ತೆ ಅವರ ಮುಖ ನೋಡಲಿಲ್ಲ. ಆ ಮೇಲೆ, ಪೂರ್ವಜನ್ಮದ ಪುಣ್ಯವಿದ್ದುದರಿಂದ ಇಲ್ಲಿಗೆ ಬಂದೆ. ಆ ವರ್ಷ ಹುಟ್ಟಿದಳು ನನ್ನ ಲೀಲೆ. ಅಲ್ಲ; ನನ್ನ ಹೊನ್ನಿಯನ್ನು ನೀವು ಕದ್ದುಕೊಂಡಿರಿ.

**ಇಂದಿರೆ.** — ತಿಂಗಳು ಯಾವುದೆಂದು ನಾನು ಕೇಳಿದೆ

**ಲೀಲೆ.** — ವರ್ಷಕ್ಕೆ ತಿಂಗಳೆಷ್ಟು, ಆರೋ ಎಂಟೋ?

(ಇಂದಿರೆಯೂ ಲೀಲೆಯೂ ನಗುವರು.)

**ಪನ್ನೆ.** — ನೀವು ನಗುತ್ತೀರಿ ರಾಣಿಯರೇ! ನನಗೆ ಅಷ್ಟೇ ಗೊತ್ತು. ಹೆಚ್ಚುಗೊತ್ತಿಲ್ಲವೆಂದು ನಾನು ಮಾಡುವ ಗೃಹಕೃತ್ಯಕ್ಕೇನೂ ತೊಂದರೆಯಾಗಲಿಲ್ಲ. ಒಲೆಯ ಮೇಲೆ ಎಸರಿಟ್ಟರೆ ಅದು ಕುದಿಯ ಬೇಕಾದರೆ ವರ್ಷಕ್ಕೆ ತಿಂಗಳೆಷ್ಟೆಂದು ಗೊತ್ತಿರಬೇಕೇ? ಹಾಕಿದ ಅಕ್ಕಿ ಬೇಯಬೇಕಾದರೆ ವರ್ಷದ ತಿಂಗಳು ತಿಳಿದಿರಬೇಕೇ? — ಯಾವುದೂ ಗೊತ್ತಿಲ್ಲದೆ ಎಸರು ಕುದಿಯುತ್ತಿತ್ತು; ಅಕ್ಕಿಬೆಂದು ಅನ್ನವಾಗುತ್ತಿತ್ತು. ನೀವು ಮಾತ್ರ ನಗುತ್ತೀರಿ, ಮಹಾರಾಣಿಯವರೇ!

**ಇಂದಿರಾ.** — ಹೌದು ಪನ್ನೆ, ನೀನು ಹೇಳಿದ ಮಾತು ಸರಿ. ಹೋಗು ನೀನು.

**ಪನ್ನೆ.** — ಕಥೆ ಮುಗಿಸಿ ಬಿಡುತ್ತೇನೆ. ಆ ವರ್ಷ ನಮ್ಮ ಲೀಲೆ ಹುಟ್ಟಿದಳು.

**ಇಂದಿರಾ.**—ಪನ್ನೆ! ಬಾಯಿಗೆ ಬೀಗ ಹಾಕು!

**ಪನ್ನೆ.**—ಮತ್ತೆ ನಾಲಗೆಯನ್ನು ಕಚ್ಚಿಕೊಳ್ಳುತ್ತೇನೆ. ಆದರೆ ಲೀಲೆಯ ವರ್ಷವನ್ನು ಹೇಳಿಬಿಡುತ್ತೇನೆ. ಸರಿ...ಲೀಲೆಗೆ ನೀವು ಹೇಳು ವಂತೆ ಹನ್ನೊಂದೋ ಹನ್ನೆರಡೋ ತಿಂಗಳು. ಚಿನ್ನದ ಬೊಂಬೆಯನ್ನು ಹಿಡಿದು ನೆಲದ ಮೇಲೆ ನಿಲ್ಲಿಸಿ ಕೇಳಿದೆ—'ನಿನಗೆ ಬೇಕೋ' ಎಂದು ಕೇಳಿದೆ. 'ಬೇ—ಬೇ—ಕ್ಕು' ಎಂದುತ್ತರ. ಈ ಗೇಣುದ್ದದ ಬೊಂಬೆ ಕೊಡುವ ಉತ್ತರವಿದು. 'ಏನು ಬೇಕು ಮಗು?' ಎಂದು ಪ್ರಶ್ನೆ ಮಾಡಿದೆ. ಅರ್ಥ ತಿಳಿಯಲಿಲ್ಲ. ತಲೆಯನ್ನು ಅಲ್ಲಾಡಿಸಿತು. 'ಗಂಡ ಬೇಕೊ' ಎಂದು ಕೇಳಿದೊಡನೆ ಅರ್ಥವಾಗಿ 'ಬೇಕು' ಎಂದು ತಲೆಯನ್ನು ಅಲ್ಲಾಡಿಸ ಬೇಕೇ? ನಗಬೇಕೇ? (ಇಂದಿರೆ ನಗುವಳು. ಲೀಲಾವತಿ ಲಜ್ಜೆ ಯಿಂದವಳನ್ನು ಬಯ್ಯುವಳು.) ಎಂಥಹ ಹಲ್ಲು, ಮಲ್ಲಿಗೆಯ ಮೊಗ್ಗೆಯಂತೆ! ಎಂಥಹ ನಗೆ, ಮಲ್ಲಿಗೆಯ ಹೂವಿನಂತೆ!

**ಇಂದಿರಾ.**—ಲೀಲಾವತಿಗೆ ಬಾಯಾರಿಕೆ; ಸ್ವಲ್ಪ ಹಾಲು ತಾ.

**ಪನ್ನೆ.**—ಕಥೆಯ ಒಂದು ಬಾಲ ಮಾತ್ರ ಉಳಿದಿದೆ, ಮುಗಿಸಿ ಬಿಡುತ್ತೇನೆ. ಸರಿ! 'ಗಂಡ ಬೇಕೋ' ಎಂದು ಕೇಳಿದುದಕ್ಕೆ ನಕ್ಕಿ ತಲ್ಲಾ! 'ಮುದಿ ಗಂಡನೋ' ಎಂದು ಪುನಃ ಕೇಳಿದೆ. ಆಗ ತನ್ನ ಎಸಳಿ ನಂತಹ ಕೈಯಿಂದ ನನ್ನ ತಲೆಗೆ ಹೊಡೆಯಬೇಕೇ? (ಹ ಹ್ಹ ಹ್ಹಾ ಎಂದು ನಗುವಳು.) ಹುಡುಗ ಗಂಡನೋ ಎಂದು ಕೇಳಿದೆ. ಮತ್ತೂ ಆ ಮರಿ 'ಬೇಕು' ಎಂದು ಹೇಳಿತು ನನಗೆ ನಗು ಬಂತು (ಹ ಹ್ಹ ಹ್ಹಾ—ಎಂದು ಮತ್ತೊಮ್ಮೆ ನಗುವಳು) ಬರುವುದು ಒಂದೇ ಶಬ್ದ. ಅದೂ 'ಬೇ—ಬ್ಬೇ—ಕು' ಎಂದು. ಆ ಶಬ್ದವನ್ನು ಹೇಳುವುದು ಗಂಡ ಬೇಕೋ ಎಂದು ಕೇಳಿ ದಾಗ ಮಾತ್ರ! ಯಾರು ಕಲಿಸುತ್ತಾರೆ ಹೆಣ್ಣುಮಕ್ಕಳಿಗೆ? ಹುಟ್ಟುವಾಗಲೇ ದೇವರು ಕಲಿಸುತ್ತಾನೆ ಒಳ್ಳೆಯ ಗಂಡನನ್ನು ಕೇಳು ಎಂದು, ಅಂತಹ ಗಂಡನು ಸಿಕ್ಕುವ ವರೆಗೆ ಕೇಳು ಎಂದು!

**ಇಂದಿರಾ.**—ಪನ್ನೆ ಎಲ್ಲವನ್ನೂ ಹೇಳಿಬಿಟ್ಟಳು. ಸ್ವಲ್ಪ ಹಾಲು! ಹಾಲು!

**ಪನ್ನೆ.** — ಸರಿ; ತರುತ್ತೇನೆ. ಆ ಒಂದು ಪ್ರಶ್ನೆಯನ್ನು ಹೇಗೆ ಕೇಳಿದರೂ ಉತ್ತರ ' ಬೇಕು!' ಎಂದು ಅಲ್ಲವೆ, ಲೀಲೆ? (ಎಂದು ಹಾಲನ್ನು ತಂದು ಕೊಡುವಳು.)

**ಇಂದಿರಾ.** — ಇನ್ನೊಮ್ಮೆ ಹೇಳಿ ಬಿಡುತ್ತೇನೆ, ಲೀಲೆ! ಮನಸ್ಸಿನಲ್ಲಿ ಕಳವಳ ಪಡಬೇಕಾಗಿಲ್ಲ.

**ಲೀಲೆ.** — ಕಳವಳವೇನು, ತಾಯಿ?

**ಇಂದಿರಾ.** — ಮೊನ್ನೆ ನೀನು ನಿದ್ರಿಸುತ್ತಿದ್ದೆಯಂತೆ; ಹಗಲು! ರಾತ್ರಿಯಲ್ಲ. ಸ್ವಪ್ನದಲ್ಲಿ ಏನೇನೋ ಹೇಳಿದೆಯಂತೆ.

**ಲೀಲೆ.** — ಹೇಳಿದುದೇನು?

**ಇಂದಿರಾ.** — ಎಲ್ಲವೂ ಪನ್ನೆಗೆ ಗೊತ್ತಿದೆ.

**ಪನ್ನೆ.** — ಹೌದು, ದೇವಿ, ನಾನು ಇವಳ ಕಾಲಬುಡದಲ್ಲಿ ಕುಳಿತಿದ್ದೆ; ಸರಿ; ಹಗಲು, ಮಧ್ಯಾಹ್ನ; ಎಚ್ಚರವಾದರೆ ಊಟಕ್ಕೆ ಕರೆಯಬೇಕೆಂದು ಕುಳಿತಿದ್ದೆ. ನಮ್ಮ ಕುಮಾರಿ ಏಳುತ್ತಾಳೆ. ಮಂಚದ ಮೇಲೆ ಕುಳಿತು ಕೊಳ್ಳುತ್ತಾಳೆ. ನಾನು ' ಲೀಲಾವತೀದೇವಿ '! ಎಂದು ಸಂಬೋಧಿಸಿದರೆ, ಅವಳು 'ವಿಕ್ರಮ' ಎಂದು ಉತ್ತರ ಕೊಡುತ್ತಾಳೆ. ' ಅರ್ಥವಾಗಲಿಲ್ಲ ನನಗೆ. ಏನು ಹೇಳುತ್ತೀ ತಾಯಿ!' ಎಂದು ಪುನಃ ಕೇಳಿದೆ. ' ಕಳ್ಳರಿಂದ ಕಾಪಾಡು' ಎಂದು ಉತ್ತರ; ' ಒಮ್ಮೆ ನೀನೇ ಕಾಪಾಡಿದೆ!' ಎಂದು ಉತ್ತರ. ನನಗೇನು ಅರ್ಥವಾಗುತ್ತದೆ? ಸರಿ, ' ಊಟಕ್ಕಾಯಿತು ತಾಯಿ; ಕರೆಯುತ್ತಾರೆ ದೇವಿಯರು' ಎಂದೆ. ನಮ್ಮ ಕುಮಾರಿ ಮತ್ತು ಮತ್ತು ಅಳುತ್ತಾ ' ನನ್ನ ಪ್ರಾಣವನ್ನು ಕಾಪಾಡು!' ಎಂದಳು. ಸರಿ, ' ನಾನೇನು ಕಾಪಾಡುವುದು? ಇದು ಸ್ವಪ್ನ, ದೇವಿ ಎಂದುದಕ್ಕೆ ' ಹಾ! ಎಲ್ಲವೂ ಸ್ವಪ್ನವೇ' ಎಂದು ಅತ್ತಳು. ನಾನು ದೇವರೇ ಕಾಪಾಡಬೇಕೆಂದು ಕೈಜೋಡಿಸಿದೆ. ಕುಮಾರಿ ಎದ್ದು ನಿಂತಳು; ಓಡಿ ಹಿಡಿದುಕೊಂಡೆ. ಪಕ್ಕನೆ ಎಚ್ಚರವಾದಂತೆ ನಟಿಸಿ ' ಯಾರು ಪನ್ನೆ!' ಎಂದು ಕೇಳಿ ಕಣ್ಣೀರನ್ನು ತೊಡೆದಳು. ಆ ಕಣ್ಣೀರಿಗೂ ಆ ವಿಕ್ರಮನಿಗೂ ಅರ್ಥವೇ ಆಗಲಿಲ್ಲ ನನಗೆ. ಆದರೆ ಎಂತಹ ಮುಖ ಆ ಸಮಯದಲ್ಲಿ! ನಾನು ಆಗಲೆ ಹೇಳಿದೆನಲ್ಲಾ! ಹತ್ತು ಹನ್ನೆರಡು ತಿಂಗಳ

ಕೂಸಿನ ನೆನಪಾಯಿತು ನನಗೆ....ಹಹ್ಹಾ ಆಗ ನಾನು ಕೇಳಿದುದು 'ಗಂ...

**ಲೀಲಾವತಿ** (ಸಿಟ್ಟಿನಿಂದ).—ಪನ್ನೆ! ಮುಚ್ಚು ಬಾಯಿ

**ಪನ್ನೆ.**—ನನ್ನ ತಪ್ಪೇನು? ಹೆಂಗುಸಾಗಿ ಹುಟ್ಟಿದವಳು ಒಬ್ಬ ಗಂಡುಸಿನ ಕೈ ಹಿಡಿಯಬೇಕು. ದೇವರು ನಡೆ ಬಾರದ ಹುಡುಗಿಯರ ಬಾಯಿಯಿಂದಲೂ 'ಬೇಕು ಬೇಕು' ಎಂದು ಹೇಳಿಸುತ್ತಾನೆ. ನನಗೆ ನಗೆ ಬರುತ್ತದೆ..ಹಹ್ಹ....

**ಇಂದಿರಾ.**—ಪನ್ನೆ, ಹೋಗು ನೀನು ನಿನ್ನ ಕೆಲಸಕ್ಕೆ.

**ಪನ್ನೆ.**—ಹೋಗುತ್ತೇನೆ. ಆದರೆ ಅಂದಿನ ಸಂಗತಿ ನೆನಪಿಗೆ ಬಂದೊಡನೆ...ಹ ಹ್ಹ ಹ್ಹ...(ಹೋಗುವಳು).

**ಇಂದಿರಾ.**—ನಾನು ಹೇಳಬೇಕಾದುದೇನೆಂದರೆ ಇನ್ನೆಂಟು ದಿವಸಗಳಲ್ಲಿ ನಿನಗೆ ಹದಿನಾರು ವರ್ಷ ತುಂಬುತ್ತದೆ. ನೀನು ಹುಡುಗಿ.....

**ಲೀಲಾವತಿ.**—ಹುಡುಗಿಯರಿಗೆ ಹದಿನಾರು ವರ್ಷ ತುಂಬಲೇ ಬಾರದೋ?

**ಇಂದಿರಾ.**—ಅದರಲ್ಲೇನೂ ಆಶ್ಚರ್ಯವಿಲ್ಲ ಆದರೆ ಮತ್ತೆಯೂ ಅವಿವಾಹಿತೆಯಾಗಿರುವುದು ಅಷ್ಟು ಚಂದವಲ್ಲ.

**ಲೀಲಾವತಿ.**—ಹೀಗೆಲ್ಲಾ ನನ್ನೊಡನೆ ಮಾತಾಡುವುದೇನು?

**ಇಂದಿರಾ.**—ಮೊದಲೇ ಹೇಳಿದೆನಲ್ಲಾ ಈ ಚೈತ್ರ ಮಾಸಕ್ಕೆ ನಿನ್ನ ೧೬ ಬಾಲ್ಯದ ವರ್ಷಗಳು ಸಂದುಹೋದುವು. ಇನ್ನು ನೀನು ಹೆಂಗುಸು; ಹುಡುಗಿಯಲ್ಲ.

**ಲೀಲಾವತಿ.**—ಹುಡುಗಿಯಾದರೆ ಹುಡುಗಿ, ಹೆಂಗುಸಾದರೆ ಹೆಂಗುಸು; ನೀನು ಹೇಳಿದಂತೆ.

**ಇಂದಿರಾ.**—ಇದುವರೆಗೆ ನಿನಗೆ ಷೋಡಶ ವರ್ಷ ತುಂಬಿರಲಿಲ್ಲ. ನಿನ್ನ ಜನ್ಮೋತ್ಸವವನ್ನು ಸಡಗರದಿಂದ ಮಾಡಿಸಬೇಕೆಂದು ತಂದೆಯ ಅಪೇಕ್ಷೆ.

**ಲೀಲಾವತಿ.**—ಹಾಗೆಂದರೆ?

**ಇಂದಿರಾ.**— ಬಂಧುಗಳು, ಬಳಗದವರು ಎಲ್ಲ ಆ ದಿನ ಆಮಂತ್ರಿಸಲ್ಪಡುವರು. ಅಧಿಕಾರಿವರ್ಗದಲ್ಲಿಯೂ ಕೆಲವರಿಗೆ ಆಹ್ವಾನವಿರುವುದು.

**ಲೀಲಾವತಿ** — ಯಾರಿಗೆಲ್ಲ ?

**ಇಂದಿರಾ.**— ವಿಕ್ರಮಸಿಂಹನಿಗೂ ಕರೆ ಹೋಗುವುದು.

**ಲೀಲಾವತಿ.**— ಅದನ್ನು ನಾನು ಕೇಳಲಿಲ್ಲ. (ಎಂದು ತಲೆ ಬಾಗಿಸುವಳು.)

**ಇಂದಿರಾ.**— ಕೆಲವು ವಿಷಯಗಳನ್ನು ಕೇಳದಿದ್ದರೂ ಹೇಳುವುದರಲ್ಲಿ ಔಚಿತ್ಯವುಂಟು. ಅವನೂ ಪರಿವಾರ ಸಮೇತನಾಗಿ ಬರುವನು; ಅಲ್ಲ, ಅವನೇ ಆ ದಿನದ ಅತಿಥಿಯೆಂದರೂ ಸಲ್ಲುವುದು.

**ಲೀಲಾವತಿ.**— ಬೇರೆಯವರು ಅತಿಥಿಗಳೇ ಅಲ್ಲ!

**ಇಂದಿರಾ.**-- ಹಾಗಲ್ಲ ಲೀಲೆ! ಅವನೇ ನಮ್ಮ ಹೃದಯ ಸಮೀಪವರ್ತಿಯಾಗಿದ್ದಾನೆ. ಅದಲ್ಲದೆ ತನ್ನ ಜೀವದ ಹಂಗನ್ನು ತೊರೆದು ನಿನ್ನ ಜೀವವನ್ನುಳಿಸಿದನು. ನಮ್ಮ ಬಂಧುತ್ವದಲ್ಲಿ ಅವನಿಗೆ ಹೆಚ್ಚಿನ ಅಧಿಕಾರವಿದೆ. (ಲೀಲಾವತಿ ಮೌನದಲ್ಲಿರುವಳು.)

**ಇಂದಿರಾ.**— ಹೆಚ್ಚೇನು ? ಕಾಣುವುದಕ್ಕೆ ಸಲಕ್ಷಣನಾಗಿದ್ದಾನೆ; ಪ್ರಾಯ ಹೆಚ್ಚಾಗಲಿಲ್ಲ. ನಿನ್ನಿಂದ ಆರೆಂಟು ವರ್ಷಕ್ಕೆ ಹಿರಿಯನೊ ಏನೊ! ತಂದೆಗೆ ಅವನಲ್ಲಿ ಅಳಿಯನೆಂಬ ಮಮಕಾರ ಹುಟ್ಟಿದೆ. ನನಗೂ ಆಗದ ಸಂಬಂಧವೆಂದು ತೋರುವುದಿಲ್ಲ.

**ಲೀಲಾ.**— ತಾಯೆ! ನನಗೆ ಕುಳಿತು ಕುಳಿತು ಬೇಸರವಾಗುತ್ತದೆ. ಅಂಗಳದಲ್ಲಿ ಸ್ವಲ್ಪ ತಿರುಗಾಡುತ್ತೇನೆ. (ಏಳುವಳು.)

**ಇಂದಿರಾ.**— ಹೇಳಿಬಿಡುತ್ತೇನೆ. ಆ ದಿನ ಎಂದಿನಂತಲ್ಲ. ಪನ್ನೆಯಲ್ಲಿ ಹೇಳುತ್ತೇನೆ— ಮಂಗಲೋತ್ಸವಕ್ಕೆ ತಕ್ಕ ಅಲಂಕಾರವನ್ನು ಮಾಡಿಕೊಂಡು ನೀನು ಸಭೆಗೆ ಬರಬೇಕು.

**ಲೀಲಾ.**— ಪನ್ನೆಯೋ! ಅವಳು ಶೃಂಗಾರ ಮಾಡಿದರೆ ಪಾಪೆಯ ವೇಷವಾದೀತು.

**ಇಂದಿರಾ.**—ಅಲ್ಲ; ನಾನೇ ಬರುತ್ತೇನೆ. ಹೊತ್ತು ಮೂಡುವುದರೊಳಗೆ ನಾನೇ ಇಲ್ಲಿಗೆ ಬಂದು ತಲೆ ಬಾಚಿ, ಹಣೆಗೆ ಕುಂಕುಮವಿಡುತ್ತೇನೆ. ಸೀರೆಯುಡಿಸುತ್ತೇನೆ; ಆಭರಣ ತೊಡಿಸುತ್ತೇನೆ.

**ಲೀಲಾ.**—ಹುಂ.

**ಇಂದಿರಾ.**—ಹೋಗು, ನಾನು ಹೇಳುವುದಿಷ್ಟೆ. ಒಂದೆರಡು ಸಲ ಮಿಂದು ಸವಿಯಾದ ಊಣಿಸುಗಳನ್ನು ಉಣ್ಣು. ಆರಿಹೋದ ಒಡಲು ಕೂಡುತ್ತಾ ಬರಲಿ. ಒಂದೆರಡು ಕಥೆಯ ಪುಸ್ತಕಗಳನ್ನೋದು. ಸಾಯಂಕಾಲ ಸ್ವಲ್ಪ ತಿರುಗಾಡಿ ಬಾ. ಆಗ ಇಂದು ಬಿಳುಪೇರಿದ ಕೆನ್ನೆ ತುಂಬುವುದು. ಲೀಲೆ, ಮೊದಲಿನ ಲೀಲೆಯೆ ಆಗುವೆ.

**ಲೀಲಾ.**—ಹೇಗೂ ಆಗಲಿ; ನಾನು ಹೋಗುತ್ತೇನೆ.

**ಇಂದಿರಾ.**—ನೀನು ವಿಹಾರಕ್ಕೆ ಹೋಗು; ನಾನು ರಾಣಿವಾಸಕ್ಕೆ ತೆರಳುತ್ತೇನೆ. (ಹೋಗುವಳು.)

**ಲೀಲಾ.**—ಈ ಸಂಧ್ಯಾಕಾಲದಲ್ಲಿ ಇಂತಹ ಸಂದೇಶ ಬಂತು. ನಂಬಬಹುದೆ ಇದನ್ನು? ಸಂಧ್ಯಾನಕ್ಷತ್ರಗಳೇ! ಹಗಲಿರುಳುಗಳ ನಡುವಿನ ಈ ಜೀವನವನ್ನೂ ಇದರ ಸುಖಸಂದೇಶಗಳನ್ನೂ ನಂಬಬಹುದೇ? (ಆಕಾಶವನ್ನು ನೋಡಿ ಕೈಮುಗಿದು ಬಾಷ್ಪ ಬಿಂದುಗಳನ್ನು ಸುರಿಸುವಳು.)

## ದೃಶ್ಯ ೩

[ಮಧುಸೂದನ ಮಿಶ್ರನ ಪ್ರವೇಶ. ಅರಮನೆಯ ಪ್ರಾಂಗಣ. ಶಾರ್ದೂಲಸಿಂಹ].

**ಶಾರ್ದೂಲಸಿಂಹ.**—ಓಹೊ! ಮಿಶ್ರಮಹಾನುಭಾವರು ಈಗೀಗ ಬಹಳ ಅಪರೂಪ.

**ಮಿಶ್ರ.**—ಅಪರೂಪನಾಗಿದ್ದರೆ ಸಂಬೋಧನೆ ಮಾಡುವಾಗ ಬಹುವಚನವಾದರೂ ಬರುತ್ತದೆ.

**ಶಾರ್ದೂಲ.**—ಬಹುವಚನಕ್ಕೇನು ಕೊರತೆ?

**ಮಿಶ್ರ.**—ನಮ್ಮಂಥವರ ಮಟ್ಟಿಗೆ ಕೊರತೆಯೆ.

**ಶಾರ್ದೂಲ.**—ಬಹುವಚನ ಪ್ರಯೋಗವು ಕೊರತೆಯೆಂದೊ?

**ಮಿಶ್ರ.**—ನಿಮ್ಮ ಬುದ್ಧಿಗೆ ಹಾಗೆಯೇ ಕಾಣುತ್ತದೆ, ನೋಡಿ.

**ಶಾರ್ದೂಲ.**—ಆಗಲಿ; ಅಪರೂಪವಾಗಿ ತಾವು ಇತ್ತ ದಯಮಾಡಿದುದು ಒಳ್ಳೆಯದೇ ಆಯಿತೆನ್ನೋಣ.

**ಮಿಶ್ರ.**—ನಿಮಗೆ ಒಳ್ಳೆಯದನ್ನಲ್ಲ, ಕೆಟ್ಟದನ್ನು ಮಾಡಬೇಕಾದ ಪಕ್ಷದಲ್ಲಿಯೂ ಪದೇಪದೇ ಬರಲು ಅವಕಾಶವೇ ಇಲ್ಲ.

**ಶಾರ್ದೂಲ.**—ಕಾರ್ಯಬಾಹುಲ್ಯ.

**ಮಿಶ್ರ.**—ಹೌದು; ರಾಜಕಾರ್ಯ.

**ಶಾರ್ದೂಲ.**—ರಾಜಕಾರ್ಯದಲ್ಲಿ ಮಾಂಸವೆಷ್ಟು ಧ್ವಂಸವಾಗುತ್ತದೆ, ಮಹಾನುಭಾವರೆ?

**ಮಿಶ್ರ.**—ಅತ್ತಿತ್ತ ನೋಡಲು ಅವಕಾಶವಿಲ್ಲ; ಕಡಿದ ಯಜ್ಞೋಪವೀತವನ್ನು ಕಟ್ಟಿಕೊಳ್ಳಲು ಸಮಯವಿಲ್ಲ, ಸಿಂಗಜಿ!

**ಶಾರ್ದೂಲ.**—ಇರುವ ಯಜ್ಞೋಪವೀತವನ್ನು ಕಡಿದು ಬಿಡಿ; ಮತ್ತೆ ಕಟ್ಟಿಕೊಳ್ಳುವ ಪ್ರಸಂಗವೇ ಬರುವುದಿಲ್ಲ.

**ಮಿಶ್ರ.**—ಅಬ್ರಹ್ಮಣ್ಯಮ್.

**ಶಾರ್ದೂಲ.**—ಮತ್ತೆ ರಗಳೆಯೇ ಇಲ್ಲ. ರಾಜಕಾರ್ಯವೊಂದನ್ನೇ ಮಾಡಬಹುದು.

**ಮಿಶ್ರ.**—ಏನಯ್ಯ ಸಿಂಗಜಿ! ಹೀಗೆಲ್ಲಾ ಹೇಳುವುದೇ? ಮತ್ತೆಲ್ಲಾ ಹೋದರೂ, ಯಜ್ಞೋಪವೀತ ಒಂದಾದರೂ ಬೇಡವೇ? ಸಾಯುವ ಕಾಲಕ್ಕೆ, ಯಮದೂತರು ಬಂದು ನಿಮ್ಮ ಜಾತಿಯೇನೆಂದು ಕೇಳುವಾಗ, ಬ್ರಾಹ್ಮಣ ಎನ್ನುವುದಕ್ಕೆ ಒಂದೇ ಒಂದು ಸಾಕ್ಷಿಯಾದರೂ ಬೇಡವೇ?

**ಶಾರ್ದೂಲ.**—ಬ್ರಹ್ಮಧರ್ಮದ ಕೊರಳಿಗೆ ಉರುಳು ಹಾಕಿ ನೇತಾಡಿಸುವುದಕ್ಕೆ ಒಂದೇ ಒಂದು ಹಗ್ಗವಾದರೂ ಬೇಡವೇ?

**ಮಿಶ್ರ.**—ಸಾಕು ಸಿಂಗಜಿ; ಇಂಥಹ ಅಪಮಾನವನ್ನು ಕೇಳಲಾರೆ. (ಕಿವಿ ಮುಚ್ಚುವನು.)

**ಶಾರ್ದೂಲ.**—ಸಿಟ್ಟಿದ್ದರೆ ಆ ಮಾತನ್ನೇ ಎತ್ತುವುದಿಲ್ಲ. ಆದರೆ ರಾಜಕಾರ್ಯದ ವಿಷಯವಾಗಿ ಒಂದೇ ಒಂದು ಪ್ರಶ್ನೆ ಕೇಳುತ್ತೇನೆ. ಈ ಬ್ರಹ್ಮಾಂಡ ಭಾಂಡದಲ್ಲಿ ಎಷ್ಟು ಹೆಂಡ ಹಿಡಿದೀತು ?

**ಮಿಶ್ರ.**—ಇದು ತಮಾಷೆಯೊ? ಹುಚ್ಚೊ ?

**ಶಾರ್ದೂಲ.**—ನಿಮ್ಮಂತೆ ಮಿಶ್ರ ಜಾತಿಯದು. ಈ ಭಾಂಡದಲ್ಲಿ; ಅಲ್ಲ; ಈ ಬ್ರಹ್ಮಾಂಡ, ಈ ಹೊಟ್ಟೆಯಲ್ಲಿ, ಎಷ್ಟು ಮದಿರೆ ಹಿಡಿದೀತು ? ಎಂದು ಕೇಳಿದೆ; ಅದಕ್ಕೆ ಉತ್ತರವೇ ಇಲ್ಲ.

**ಮಿಶ್ರ.**—ಬರೇ ಹುಚ್ಚು !

**ಶಾರ್ದೂಲ.**—ಹಗಲು ರಾತ್ರಿಯೆನ್ನದೆ ಕುಡಿಯುವುದು ಹುಚ್ಚು; ಆ ಮಾಂಸ ಈ ಮಾಂಸವೆಂಬ ಭೇದವಿಲ್ಲದೆ ಸರ್ವಾಮಿಷ ಭಕ್ಷಣವನ್ನು ಮಾಡುವುದು ಬರಿಯ ಹುಚ್ಚು.

**ಮಿಶ್ರ.**—ತಮಾಷೆ! ತಮಾಷೆ!!

**ಶಾರ್ದೂಲ.**—ಇದು ತಮಾಷೆಯಲ್ಲ. ನಾನು ಮನಃಪೂರ್ವಕವಾಗಿ ಕೇಳುತ್ತೇನೆ, ಮಿಶ್ರವರ್ಯರೆ, ನಿಮಗೆ ಎಷ್ಟೋ ವೇಳೆ ಶಹನ ಸಹಪಂಕ್ತಿ ಭೋಜನವು ಪೂರ್ವಜನ್ಮದಲ್ಲಿ ಆಚರಿಸಿದ ಜಪತಪಗಳ ಪ್ರಭಾವದಿಂದ ದೊರತಿರಬಹುದು. ಆಗ ಎಷ್ಟು ಕುರಿಮಾಂಸವನ್ನು ಈ ಭಾಂಡಕ್ಕೆ ತುಂಬಿಸಿದ್ದೀರಿ ?

**ಮಿಶ್ರ.**—'ಉದರನಿಮಿತ್ತಂ ಬಹುಕೃತವೇಷಃ.' ಆದರೂ ಬ್ರಾಹ್ಮಣ ಮಾಂಸ ತಿನ್ನುತ್ತಾನೇನಯ್ಯಾ?

**ಶಾರ್ದೂಲ.**—ಬ್ರಾಹ್ಮಣನು ತಿನ್ನುವುದಿಲ್ಲ.

**ಮಿಶ್ರ.**—ಹಾಗಾದರೇನು ಇಂತಹ ಅಬದ್ಧಾಲಾಪ ?

**ಶಾರ್ದೂಲ.**—ಬ್ರಾಹ್ಮಣನು ತಿನ್ನುವುದಿಲ್ಲ; ಆದರೆ ತಮ್ಮಂತಹ ಮಿಶ್ರ ಬ್ರಾಹ್ಮಣನು ?

**ಮಿಶ್ರ.**—ನಾನು ಮೊದಲೇ ಹೇಳಿದ್ದೇನೆ, ಇದು ವಿನೋದವೆಂದು.

**ಶಾರ್ದೂಲ.**—ನಿಮಗೆ ಇದಿ ಜೀವನವೇ ವಿನೋದ!

**ಮಿಶ್ರ.**—ರಾಜಕಾರ್ಯದಿಂದ ಹಾಸ್ಯಕ್ಕಿಳಿಯಿತು ಮಾತು.

**ಶಾರ್ದೂಲ.**—ಇಲ್ಲದಿದ್ದರೆ ಬ್ರಾಹ್ಮಣಧರ್ಮವನ್ನು ಸುಟ್ಟು ಬೂದಿ ಮಾಡಿ ಮುಖಕ್ಕೆ ಬಳಿದುಕೊಂಡು ತುರುಷ್ಕನ ಪಾದಧೂಲಿಯಲ್ಲಿ ಹೊರಳಾಡಿ, ಇನ್ನೂ ಅಬ್ರಹ್ಮಣ್ಯ ಸುಬ್ರಹ್ಮಣ್ಯ ಎನ್ನುತ್ತಿರಲ್ಲ!

**ಮಿಶ್ರ.**—ನಿಮಗೆ ಹಾಗೆ ಕಂಡೀತು, ಸಿಂಗಜಿ.

**ಶಾರ್ದೂಲ.**—ಹಾಗೆ ಕಾಣದುದು ಯಾರಿಗೆ ?

**ಮಿಶ್ರ.**—ದೇಶಕಾಲಪಾತ್ರಗಳನ್ನರಿತು ಕೆಲಸ ಮಾಡಬಲ್ಲ ನಮ್ಮಂಥವರಿಗೆ.

**ಶಾರ್ದೂಲ.**—ನಿಮ್ಮಂಥವರು ನೀವೇ.

**ಮಿಶ್ರ.**—ನಾವೊಬ್ಬರೆ, ಆದರೇನಾಯಿತು ?

**ಶಾರ್ದೂಲ.**—ಇನ್ನೊಬ್ಬರಿರುತ್ತಿದ್ದರೆ ನರಕದಲ್ಲಿ ಹೊಸ ಕಟ್ಟಡಗಳನ್ನು ಕಟ್ಟಿಸಬೇಕಾಗುತ್ತಿತ್ತು.

**ಮಿಶ್ರ.**—ನಿಮಗೆ ಹಾಗೆ ಕಂಡೀತು, ಸಿಂಗಜಿ. ಹಗಲು ಇರುಳು ಎಂಬ ಭೇದವನ್ನರಿಯದ ಮೂಢರಿಗೆ.

**ಶಾರ್ದೂಲ.**—ಅಲ್ಲಿ ಶಹನ ಕುರಿಮಾಂಸ ಕರೆಯುವಾಗ ಈ ಸ್ವಾಳುಕೂಳನ್ನು ತಿಂದುಕೊಂಡಿರುವುದು ಮೂಢತೆಯೇ ಸರಿ.

**ಮಿಶ್ರ.**—ಯಾವುದಕ್ಕೂ ಮೊದಲು ಮನುಷ್ಯನು ತನ್ನ ಶಕ್ತಿಯನ್ನು ತೂಗಿ ಭಾರವಿಷ್ಟೆಂದು ನೋಡಿಕೊಳ್ಳಬೇಕು.

**ಶಾರ್ದೂಲ.**—ತಿನ್ನುವ ಮಾಂಸ ಜೀರ್ಣವಾದೀತೋ ನೋಡಬೇಕು.

**ಮಿಶ್ರ.**—ಆ ಮೇಲೆ ಸಂದರ್ಭಕ್ಕೆ ಸರಿಯಾಗಿ ನಡೆದುಕೊಳ್ಳಬೇಕು.

**ಶಾರ್ದೂಲ.**—ಸಿಕ್ಕಿದಷ್ಟು ತಿನ್ನಬೇಕು ಎಂದರ್ಥವಲ್ಲವೇ ?

**ಮಿಶ್ರ.**—ಶಕ್ತಿಯುಂಟೆಂದು ಭ್ರಮಿಸಿ ಪರ್ವತಕ್ಕೆ ಭುಜ ಹೊಡೆಯು ವುದಲ್ಲ.

**ಶಾರ್ದೂಲ.**—ಸಾಕು ಬ್ರಾಹ್ಮಣ, ನಿನ್ನ ಬೋಧನೆ.

**ಮಿಶ್ರ.**—ಮದವೇರಿದ ಗೂಳಿಗಳು ಮರವನ್ನು ಹಾಯುವಂತೆ, ಕಂಡ ಕಂಡವರೊಡನೆ ಭುಜಾಸ್ಫಾಲನ ಮಾಡುವುದಲ್ಲ.

**ಶಾರ್ದೂಲ.**—ಶಕ್ತಿಯಿರುವುದರಿಂದ ಅವು ಹಾಯುತ್ತವೆ.

**ಮಿಶ್ರ.**—ಕೋಡು ಮುರಿದೂ ಹೋಗುತ್ತದೆ.

**ಶಾರ್ದೂಲ.**—ಹಾಗಾದರೂ ಅವುಗಳಿಗೆ ವ್ಯಸನವಿಲ್ಲ.

**ಮಿಶ್ರ.**—ಹಲ್ಲು ಹೋದರೂ ಚಿಂತೆಯಿಲ್ಲ; ಕಬ್ಬಿಣದ ಕಡಲೆಯನ್ನು ಜಗಿಯಲೇ ಬೇಕು. ಇದೀಗ ರಜಪೂತರ ತತ್ವ!

**ಶಾರ್ದೂಲ.**—ನಿಮ್ಮಲ್ಲಿ ತತ್ವವಿಚಾರವು ಬೇಕಾಗಿಲ್ಲ.

**ಮಿಶ್ರ.**—ತತ್ವವೇಕಯ್ಯ? ಬಲಿಷ್ಠನ ಮೇಲೆ ಹಾರುವುದು. ಹೊಡೆದ ಪೆಟ್ಟನ್ನು ತಿಂದು ಹಲ್ಲುಗಳನ್ನೆಲ್ಲಾ ಕಳಚಿಸಿಕೊಳ್ಳುವುದು. ಹೆಚ್ಚು ವೇದನೆಯಾದರೆ 'ವ್ಯಸನವಿಲ್ಲ' ಎಂಬ ಮಾತು ವೇದನೆಯನ್ನು ಆರಿಸು ವುದಷ್ಟೆ? ಮತ್ತೆ ಬೇರೆ ಮದ್ದು ಬೇಡ. ಈಗ ತಿಳಿಯಿತು, ರಜಪೂತರ ಪೌರುಷವು ಎಂತಹದೆಂದು! ಬಲಾಬಲಗಳನ್ನು ಪರೀಕ್ಷಿಸದೆ, ಹಿಂದೆ ಮುಂದೆ ನೋಡಿ ವಿಚಾರಿಸದೆ, ಕಂಡವರ ಮೇಲೆ ಹಾರಿ ಬೀಳುವುದರಲ್ಲಿಯೇ ಅವರ ಪರಾಕ್ರಮವು ಪ್ರಕಟವಾಗುವುದು. ಭಂಗಹೊಂದಿ ವ್ಯಸನವಿಲ್ಲದೆ ಕುಳಿತುಕೊಳ್ಳುವುದೇ ಅವರ ಪರಮಸಾಧ್ಯವಾಗಿರುವುದು. ಇದು ಹೇಡಿಗಳ ನಡತೆ, ಶಾರ್ದೂಲ.

**ಶಾರ್ದೂಲ**—ಮಿಶ್ರರೇ, ಬಾಯಿ ಮುಚ್ಚಿ; ನಿಮಗೆ ರಜಪೂತರ ದಿವ್ಯ ನಾಮವನ್ನು ಬಾಯಲ್ಲಿ ಉಚ್ಚರಿಸುವ ಪುಣ್ಯವಿಲ್ಲ.

**ಮಿಶ್ರ.**—ಇದ್ದ ಪುಣ್ಯವೆಲ್ಲಾ ಅವರ ಹೆಸರನ್ನುಚ್ಚರಿಸಿದ ಕಾರಣ ಈ ಮೊದಲೇ ವ್ಯಯವಾಗಿ ಹೋಯಿತು. ಪುಣ್ಯವಂತೆ! ರಜಪೂತರ ಪುಣ್ಯ ಅಹಮ್ಮದ್ ಶಹನ ಕಾಲುಜ್ಜುವುದು ಮಾತ್ರ!

**ಶಾರ್ದೂಲ.**—ಕಾಲುಜ್ಜುವ ವಿಧಿಯಲ್ಲಿ ನಿಮಗೆ ಬ್ರಹ್ಮತ್ವವು ಇದ್ದೇ ಇದೆ, ಮಿಶ್ರಮಹಾನುಭಾವರೆ!

**ಮಿಶ್ರ.**—ನಮ್ಮಂತಹರ ಮಾತು ನಿಮಗೇಕೆ, ಸಿಂಗಜಿ? ನಾವೇನೂ ಪಂತ ಪರಾಕ್ರಮಗಳ ಬುತ್ತಿಯನ್ನು ಕಟ್ಟಿಕೊಂಡು ಜನಿಸಿದವರಲ್ಲ. ಕೈಗೆ ಶಸ್ತ್ರವನ್ನು ಕೊಡಬೇಕೆಂದು ಬ್ರಹ್ಮನು ನಮ್ಮನ್ನು ಈ ಲೋಕಕ್ಕೆ ಕಳುಹಿಸಿದುದೂ ಅಲ್ಲ. ಎಲ್ಲಿಯೋ ಹರುಕುಗುದಿಸಲಿನಲ್ಲಿ ಹೋಮಧೂಮದ ವಾಸನೆಯಲ್ಲಿ ಹುಟ್ಟಿದೆವು. 'ಭವತಿಭಿಕ್ಷಾಂದೇಹಿ' ಎಂಬ ಪದಗಳು ಸಂಸ್ಕೃತ ವಾಙ್ಮಯದಲ್ಲಿರುವ ವರೆಗೆ, ಅವುಗಳನ್ನುಚ್ಚರಿಸುವ ಶಕ್ತಿ ನಮ್ಮ ನಾಲಗೆಯಲ್ಲಿರುವ ವರೆಗೆ, ನಮ್ಮ ಹೊಟ್ಟೆಗೆ ಕಡಿಮೆಯಿಲ್ಲ. ಡೊಳ್ಳು ಸ್ವಲ್ಪ ದೊಡ್ಡದಾಗಿದ್ದರೂ ಅದು ತುಂಬುವಷ್ಟು ಕೂಳು ಸಿಕ್ಕುತ್ತದೆ, ಸಿಂಗಜಿ! ನಿನ್ನೆ ಒಬ್ಬ ರಾಣ, ಇಂದೊಬ್ಬ ಸುಲ್ತಾನ್! ಯಾರಾದರೇನು ನಮಗೆ? ಬಾಯಿಗೆ ತುತ್ತು ಬಿದ್ದರೆ ಸರಿ. ಈ ತುತ್ತಿನ ಸಂಪಾದನೆಗಾಗಿಯೇ ಲೋಕವು ಏಳುತ್ತದೆ; ಬೀಳುತ್ತದೆ. ನಮಗದು ಸುಲಭವಾಗಿ, ಕತ್ತಿಗೆ ಕೆಲಸ ಕೊಡದೆ, ಬರಿಯ ನಾಲಗೆಗೆ ಕೆಲಸಕೊಟ್ಟು ನಾಲ್ಕು ಅಕ್ಷರಗಳನ್ನು ಯಾರಿಗಾದರೂ ಉಪದೇಶ ಮಾಡುವುದರಿಂದ, ದೊರೆಯುತ್ತದೆ. ಆದರೆ ಯುದ್ಧ ಮಾಡಿದೆವೆಂಬ ಹೆಗ್ಗಳಿಕೆಯಿಲ್ಲ, ಶಾರ್ದೂಲಜಿ! ಅದನ್ನು ಬಲ್ಲೆವು. ಆದರೂ ಹೊಟ್ಟೆ ತುಂಬುತ್ತದೆ. ನಿಮ್ಮ ಹೊಟ್ಟೆ ಹಸಿದು ಅಗ್ನಿ ಜ್ವಾಲೆಯಲ್ಲಿ ಕುದಿಯುತ್ತಿರುವಾಗ, ನಮ್ಮದು ತಣ್ಣಗಾಗಿ ತೃಪ್ತಿಸುಖವನ್ನು ಅನುಭವಿಸುತ್ತದೆ. ಇಷ್ಟರಿಂದ ನಮ್ಮಂತಹ ಹಾರುವರ, ಬೀಳುವರ, ಇಹಲೋಕ ಕರ್ತವ್ಯವು ಮುಗಿಯುವುದು; ಆದರೆ ನೀವು ಹಾಗಲ್ಲ, ಶಾರ್ದೂಲ ಸಿಂಗಜಿ! ಕಿಶೋರಕೇಸರಿಗಳು. ಪೌರುಷದ ಕಿಡಿಗಳು! ಅಭಿಮಾನದ ಕೆಂಡಗಳು! ಅಂಥವರು ಮೊದಲು ಆಕಾಶದ ವರೆಗೆ ಹಾರಿ, ಮತ್ತೆ ಶಹನ ಅಂಗಾಲನ್ನು ನೆಕ್ಕುವಾಗ. .

**ಶಾರ್ದೂಲ.**—ಬ್ರಾಹ್ಮಣ! ಮುಚ್ಚು ಬಾಯಿ.

**ಮಿಶ್ರ.**—ಹುಂ, ಬಂತು ಏಕವಚನ.

**ಶಾರ್ದೂಲ.**—ನಿನ್ನಂತಹ ಜಾತಿ ಭ್ರಷ್ಟನನ್ನು ಏನೆಂದು ಸಂಬೋಧಿಸಬೇಕು?

**ಮಿಶ್ರ.**—ಈ ಯಜ್ಞೋಪವೀತವಿರುವ ವರೆಗೆ ಜಾತಿ ಅದೆಲ್ಲಿಗೆ ಹೋಗುವುದು?

**ಶಾರ್ದೂಲ.**—ಇದನ್ನು ಕಡಿದು ಬಿಸಾಡುತ್ತೇನೆ.

**ಮಿಶ್ರ.**—ಅಯ್ಯೋ, ಮೂರ್ಖ! ಒಂದನ್ನು ಕಡಿದರೆ ಮತ್ತೊಂದು ಸಿಕ್ಕಲಾರದೇ?

**ಶಾರ್ದೂಲ** (ನಗುತ್ತಾ).—(ಆತ್ಮಗತ) ಬರಿಯ ಅಲ್ಪಾಶೆಯ ಬ್ರಾಹ್ಮಣನಿವನು. (ಪ್ರಕಾಶ) ನಿನ್ನ ರಕ್ತವನ್ನು ಹೀರಿಬಿಡುತ್ತಿದ್ದೆನು. ಆದರೆ ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿರುವೆಯಲ್ಲಾ!

**ಮಿಶ್ರ.**—ಹುಂ; ಈಗ ಬಂತು ಬುದ್ಧಿ. 'ಬ್ರಾಹ್ಮಣ' ಎಂಬ ಪದವನ್ನು ಕೇಳಿದೊಡನೆ ಖಡ್ಗವು ನೆಲಕ್ಕೆ ಬೀಳುತ್ತದೆ.

**ಶಾರ್ದೂಲ.**—ಖಡ್ಗವು ತಾನಾಗಿ ಬೀಳುವುದಿಲ್ಲ; ನೋಡು! (ಎಂದು ಅದನ್ನೆತ್ತಿ ಜಳಪಿಸುವನು.)

**ಮಿಶ್ರ.**—ನಿನ್ನ ಈ ಖಡ್ಗವು ಅತಿ ದರಿದ್ರ ಖಡ್ಗ. ಮನುಷ್ಯ ರಕ್ತವು ದೊರೆಯದೆ ಹಸಿದಿದೆ. ವಿಕ್ರಮಶಾಲಿಗಳ ರಕ್ತವು ಅವಕ್ಕೆಲ್ಲಿಂದ ದೊರೆಯಬೇಕು? ಆದುದರಿಂದ ಈ ಬಡ ಬ್ರಾಹ್ಮಣನದನ್ನು ಯಾಚಿಸುತ್ತಿದೆ. ಕೊಡುತ್ತೇನೆ ಸಂತೋಷವಾಗಿ; ಬ್ರಾಹ್ಮಣನಿಗೆ ಷಟ್ಕರ್ಮಾಧಿಕಾರವಿದೆಯಷ್ಟೆ? ದಾನವನ್ನು ಕೊಂಡು ಗೊತ್ತಿದೆ. ಈಗ ಅದನ್ನೇ ಮಾಡಿ ಅಭ್ಯಾಸವಾಗಲಿ. ತೆಗೆದುಕೊ ನನ್ನ ರಕ್ತವನ್ನು! ಆದರೆ ಈ ರಕ್ತವು ಶಹನ ಗುಂಡಿಗೆಯಿಂದ ಹರಿಯುವುದೆಂದೂ ನನ್ನ ಕೊರಳನ್ನು ತುಂಡಿಸುವ ಖಡ್ಗವು ಆತನ ಎದೆಗೆ ಗಾಯ ಮಾಡಿ ಆತನನ್ನು ಕೆರಳಿಸುವುದೆಂದೂ. . .

**ಶಾರ್ದೂಲ.**—ಆಹೋರು ಕೋಟೆಯೊಳಗೆ ಶಹನ ಅಪವಿತ್ರ ನಾಮವನ್ನು ಉಚ್ಚರಿಸುವೆಯಲ್ಲವೇ?

**ಮಿಶ್ರ.**—ಉಚ್ಚರಿಸದೇ ಇರಬಹುದು. ಆದರೆ ಆತನ ಧಾಟಿಯನ್ನು ಹೇಗೆ ತಡೆಯುವಿರಿ?

**ಶಾರ್ದೂಲ.**—ರಜಪೂತರ ಒಂದು ಪಿಳ್ಳೆಯಿರುವ ವರೆಗೆ ಅದು ಸಾಧ್ಯವಿಲ್ಲ!

**ಮಿಶ್ರ.— ನಾವು ಸಾಧ್ಯವಲ್ಲವೆಂದುದು ಸಾಧ್ಯವಾಗುತ್ತದೆ.** ಸಾಧ್ಯವೆಂದು ಭಾವಿಸುವುದು ಸ್ವಪ್ನದಲ್ಲಿಯೂ ಕೈಗೂಡುವುದಿಲ್ಲ.

**ಶಾರ್ದೂಲ.**— ನಮ್ಮ ವಿಚಾರದಲ್ಲಿ, ಕಲ್ಪನೆಯಲ್ಲಿ, ಶಹನೆಂಬ ವ್ಯಕ್ತಿಯೇ ಇಲ್ಲ.

**ಮಿಶ್ರ.**— ಕುರುಡರ ಕಲ್ಪನೆಯಲ್ಲಿ ಸೂರ್ಯನೆಂಬ ಜ್ಯೋತಿಪಿಂಡವಿದೆಯೇ

**ಶಾರ್ದೂಲ.**— ಶಹನೆಂಬವನು ಇದ್ದರೆ, ನಿಮ್ಮಂತಹ ದಾಸರ ಹೃದಯರಾಜ್ಯದಲ್ಲಿ.

**ಮಿಶ್ರ.**— ಕಣ್ಣಿರುವವರಿಗೆ, ಇದ್ದರೂ ಮುಚ್ಚದವರಿಗಲ್ಲವೇ ಕಾಣುವುದು?

**ಶಾರ್ದೂಲ.**— ಮೂರ್ಖ ಬ್ರಾಹ್ಮಣ! ದುರ್ವಾದದ ಜೋಳಲನ್ನು ಬಿಟ್ಟು, ಈ ಸ್ಥಳದಲ್ಲಿ ಭದ್ರವಾಗಿ ನೆಲಸಬಹುದೆಂದು ಭಾವಿಸಿರುವೆಯಾ? ನಡೆಯತ್ತ! ನಿನಗಿಲ್ಲಿ ಎಡೆಯಿಲ್ಲ.

**ಮಿಶ್ರ.**— ನನಗೆ ಎಡೆಯಿಲ್ಲದಿರಬಹುದು. ಆದರೆ ಅಹಮ್ಮದ್ ಶಹನ ಆಜ್ಞೆಗೆ ಎಡೆಯಿಲ್ಲದ ಸ್ಥಲ ಈ ಪ್ರಪಂಚದಲ್ಲಿಲ್ಲ.

**ಶಾರ್ದೂಲ.**— ಹುಂ; ಬೊಗಳು ಬೇಕಾದುದನ್ನು. ಬಂದ ಕಾರ್ಯವೇನು?

**ಮಿಶ್ರ.**— ಮೊದಲೇ ಈ ಪ್ರಶ್ನೆಯನ್ನು ಕೇಳಿದ್ದರೆ—

**ಶಾರ್ದೂಲ.**— ಮೊದಲೇ ಕೇಳಲಿಲ್ಲ. ಅದರಿಂದ ಯಾವ ಪ್ರಲಯವಾಯಿತು?

**ಮಿಶ್ರ.**— ಕುರಿ ಮಾಂಸ, ಹಂದಿ ಮಾಂಸಗಳ ಮಾರಾಟವು ಇಲ್ಲಿ ಆಗುತ್ತಿರಲಿಲ್ಲ.

**ಶಾರ್ದೂಲ.**— ಹೇಳು ನೀನಿಲ್ಲಿಗೆ ಬಂದುದೇಕೆ? ಕೆಲಸವಿಲ್ಲದಿದ್ದರೆ ನಡೆ!

**ಮಿಶ್ರ**— ಬಂದುದು ರಾಜಕಾರ್ಯದ ನಿಮಿತ್ತದಿಂದ.

**ಶಾರ್ದೂಲ.**— ನಿನ್ನ ರಾಜನಾರು? ಕಾರ್ಯವೇನು?

**ಮಿಶ್ರ.**— ಅಹಮ್ಮದ್ ಶಹನೇ ರಾಜ; ಪರ್ವತಸಿಂಗನೊಡನೆ ಮಾತಾಡ ಬೇಕೆಂಬುದೇ ರಾಜಸಂದೇಶ.

**ಶಾರ್ದೂಲ.**—ಪರ್ವತಸಿಂಗನನ್ನು ಕಾಣುವುದರಲ್ಲೇನು ಉದ್ದೇಶ?

**ಮಿಶ್ರ.**—ಅವನನ್ನು ಕಾಣಬೇಕೆಂಬುದೇ!

**ಶಾರ್ದೂಲ.**—ಮೂರ್ಖ! ನನ್ನಲ್ಲಿ ಹೇಳಲಾಗುವುದಿಲ್ಲವೇ?

**ಮಿಶ್ರ.**—ನಾನು ಮೂರ್ಖನಾಗಿದ್ದರೆ ಹೇಳಬಹುದಾಗಿತ್ತು. ಅಥವಾ ನೀನೇ ಪರ್ವತಸಿಂಗನಾಗಿದ್ದರೆ ಕೇಳಬಹುದಾಗಿತ್ತು.

**ಶಾರ್ದೂಲ.**—ಹಾಗಾದರೆ ನಾನು ಯಾರೆಂದು ಭಾವಿಸಿಕೊಂಡೆ?

**ಮಿಶ್ರ.**—ನನ್ನಂತೆ ಎರಡು ಕಾಲು, ಎರಡು ಕೈ, ಒಂದು ಮೂಗು ಎರಡು ಕಣ್ಣು ಇರುವ ಮನುಷ್ಯ! ಹಾಗೂ ಅಲ್ಲದಿದ್ದರೆ ಪರ್ವತದ ಬಳಿಯಲ್ಲಿ ಬಿಲಮಾಡಿ ವಸಿಸುವ ಇಲಿ.!

**ಶಾರ್ದೂಲ.**—ನಿನ್ನ ನಾಲಗೆಯನ್ನು ಕತ್ತರಿಸಲೇ?

**ಮಿಶ್ರ.**—ಕತ್ತರಿಸು; ಅಡ್ಡಿಯಿಲ್ಲ. ಆದರೆ ರಾಜಸೇವೆಯಲ್ಲಿ ಆಡುವ ನಾಲಗೆಯ ಬೆಲೆಯನ್ನು ಕೊಡಲೇ ಬೇಕಾದೀತು.

**ಶಾರ್ದೂಲ.**—ಈ ಚರ್ಮದ ಚೂರಿಗೆ ಬೆಲೆಯೆಷ್ಟು?

**ಮಿಶ್ರ.**—ಹೆಚ್ಚಿನ ಬೆಲೆಯಿಲ್ಲ. ರಜಪೂತರ ಬಿಸಿ ರಕ್ತದ ಸಹಸ್ರ ಧಾರೆಗಳನ್ನು ಕೊಡಬೇಕಾದೀತು!

**ಶಾರ್ದೂಲ.**—ನಿನ್ನಂತಹ ಭ್ರಾಂತನಲ್ಲಿ ಮಾತಾಡಬೇಕಾಗಿಲ್ಲ. ಹೋಗುತ್ತೇನೆ ನಾನು.

**ಮಿಶ್ರ.**—ಭ್ರಾಂತಿಯ ವಿಷಯ ಈಗ ತಾನೆ ತಿಳಿಯಿತಲ್ಲವೇ?

**ಶಾರ್ದೂಲ.**—ಅಲ್ಲ; ನೀನಿಲ್ಲಿ ಕುಳಿತಿರು. ನೀನೊಬ್ಬ ಬ್ರಾಹ್ಮಣ ನೆಂದು ಹೇಳಿಕೊಳ್ಳುವೆಯಲ್ಲ. ಈ ಯಜ್ಞೋಪವೀತವು ಪ್ರಾಣವನ್ನುಳಿಸಿತು. ಧರ್ಮಚ್ಯುತ ಬ್ರಾಹ್ಮಣನಾದರೂ ಮನುಷ್ಯಾಕಾರದಲ್ಲಿರುವೆಯಷ್ಟೆ? ಮಾನವನೆಂಬ ಹೆಸರಾದರೂ ಇದೆಯಷ್ಟೆ? ಹೋಗು! (ಕೈಯೆತ್ತಿ ತೋರಿಸಿ) ಅಲ್ಲಿ ಸೇವಕರಿರುವರು· ಹಸಿವೆಯಾದರೆ ಏನಾದರೂ ಕೊಟ್ಟಾರು. ಅಲ್ಲಿ ಬಿದ್ದಿರು. ನಾನು ಬರುತ್ತೇನೆ.

**ಮಿಶ್ರ.**—ಸುಲ್ತಾನನ ಕಾರ್ಯವಿದು. ರಾಜದರ್ಶನವಾಗಬೇಕು; ಏನಾದರೂ ಕೇಳುವುದಕ್ಕೆ, ಹಸಿವೆಯಾದರೆ ಬಾಯೊಡೆಯುವುದಕ್ಕೆ, ಬಂದವನಲ್ಲ ನಾನು.

**ಶಾರ್ದೂಲ.**—ಆತನ ಹೆಸರೆತ್ತಬೇಡ. ರಾಜರನ್ನು ನಾನೇ ಕಾಣುತ್ತೇನೆ.

**ಮಿಶ್ರ.**—ಕಂಡರೆ ಸಾಲದು; ಶಹನ ಕಡೆಯಿಂದ ಬಂದಿದ್ದಾನೆ ಒಬ್ಬ ಬ್ರಾಹ್ಮಣ, ಆತನ ಮಂತ್ರಿ, ಎಂದು ಹೇಳಬೇಕು. ಆಗ ಗೊತ್ತಾದೀತು ರಾಜನಿಗೆ.

**ಶಾರ್ದೂಲ.**—ಮನಬಂದಂತೆ ಹೇಳುತ್ತೇನೆ. ಬ್ರಾಹ್ಮಣನೊಬ್ಬ ಬಂದಿರುವನೆಂದಾಗಲಿ, ಒಂದು ನಾಯಿ ಬಂದಿರುವುದೆಂದಾಗಲಿ ಹೇಳುತ್ತೇನೆ. ಆಗ ಅರಸನಿಗೆ ಅರ್ಥವಾದೀತು

**ಮಿಶ್ರ.**—ಮನ ಬಂದಂತೆ ಆಡಿದರೆ, ಮನಕ್ಕೆ ಬೇಡವಾದುದು ಆದೀತು!

**ಶಾರ್ದೂಲ.**—ಆಗುವುದೆಲ್ಲಾ ಆಗಲಿ; ನೀನಿಲ್ಲಿ ಕಾದಿರು.

**ಮಿಶ್ರ.**—ಎಷ್ಟು ಸಮಯ ಕಾದಿರಬೇಕು?

**ಶಾರ್ದೂಲ.**—ರಾಜನ ಉತ್ತರ ದೊರೆಯುವ ತನಕ (ಎಂದು ಹೋಗುತ್ತಾನೆ.)

**ಮಿಶ್ರ.**—ಆಹಾ, ರಾಜಸೇವಕರ ಅಹಂಕಾರವೇ! ರಾಜನ ತಲೆಯಿಂದ ಮುಕುಟವು ಎಂದು ಜಾರಿ ಬೀಳುವುದೋ ಗೊತ್ತಿಲ್ಲ. ಆದರೂ ಹೆಮ್ಮೆ! ಮುಕುಟಧಾರಣವನ್ನು ಮಾಡುವ ತಲೆಗೆ ಆ ಮುಕುಟದ ಭಾರವು ಇಷ್ಟೇ ಇದೆಯೆಂದು ಗೊತ್ತಿದೆ. ಆದುದರಿಂದ ಮದ ಬರುವುದಿಲ್ಲ. ಇವು ಗಾಳಿ ಪಟಗಳು, ಕಟ್ಟಿದ ಹಗ್ಗ ಕಡಿವ ವರೆಗೆ ಹಾರಾಟ. ಹುಂ; ಮಾಡುವುದೇನು? ಲೋಕದ ಸ್ಥಿತಿಯೇ ಹೀಗೆ (ಎಂದು ಹೋಗುವನು.)



# ಎರಡನೆಯ ಅಂಕ

## ದೃಶ್ಯ ೧

[ಆಹೋರಿನ ಅರಮನೆಯ ಒಂದು ಭಾಗ; ರಾಮಸಿಂಗನ ಪ್ರವೇಶ.]

**ರಾಮಸಿಂಗ.**—ಆ ತುರುಷ್ಕ ರಾಜ್ಯದಿಂದ ಯಾವನೋ ಒಬ್ಬ ಬ್ರಾಹ್ಮಣನು ಬಂದಿದ್ದಾನೆಂದು ಕೇಳಿದೆ. ಯಾಕೆ ಬಂದಿರಬಹುದು?

[ಅಷ್ಟರಲ್ಲಿ ಮಧುಸೂದನನ ಪ್ರವೇಶ.]

**ಮಧುಸೂದನ.**—ಯಾವನೋ ಒಬ್ಬನಲ್ಲ! ಮಧುಸೂದನ ಮಿಶ್ರ. ಆ ಹೆಸರನ್ನು ಕೇಳದವರು ಹುಟ್ಟಬೇಕಷ್ಟೆ!

**ರಾಮಸಿಂಗ.**—ಮಿಶ್ರವರ್ಯರೇ' ನಮಸ್ಕಾರ.

**ಮಿಶ್ರ** (ಆತ್ಮಗತ).—ಶಿಷ್ಟಸಂಪ್ರದಾಯದ ತಿರುಳೆಂದರೆ ಇದು! (ಪ್ರಕಾಶ) ಹುಂ; ನಮಸ್ಕಾರ.

**ರಾಮಸಿಂಗ.**—ಮನಸ್ಸಿನಲ್ಲಿ ಬೇಸರವಿದ್ದಂತೆ ಕಾಣುತ್ತದೆ.

**ಮಿಶ್ರ.**—ಹುಂ; ಯಾವುದರಿಂದ ಕಾಣುತ್ತದೆ?

**ರಾಮಸಿಂಗ.**—ನಿಮ್ಮ ಹೂಂಕಾರದಿಂದ.

**ಮಿಶ್ರ.**—ಹೂಂಕಾರಕ್ಕೆ ಏನಾದರೊಂದು ಅರ್ಥವಿರುತ್ತದೆ ಎಂಬುದೇನೋ ನಿಜ.

**ರಾಮಸಿಂಗ.**—ಸಂದೇಹವೇನು ಮಿಶ್ರರೇ? ಹೃದಯದ ವಿಷಯವಾಗಿ ಅದು ಚಾಡಿ ಹೇಳದೆ ಬಿಡುವುದಿಲ್ಲ.

**ಮಿಶ್ರ.**—ಶಹಭಾಸ್ ರಾಮಸಿಂಗ! ನೀನೇ ಇಂಗಿತಜ್ಞ; ಹೌದು; ಹೃದಯದಲ್ಲಿ ಬೇಸರವೇನಾದರೂ ತುಂಬಿದ್ದರೆ, ಅದು ಹೂಂಕಾರದ ತೂಬಿನಲ್ಲಿ ಹರಿದುಹೋಗುತ್ತದೆ.

**ರಾಮಸಿಂಗ.**—ಬೇಸರದ ಕಾರಣವನ್ನು ನಾವು ಕೇಳಬಹುದೇ ?

**ಮಿಶ್ರ.**—ಕೇಳಬಾರದು ರಾಮಸಿಂಗ. ಆಪ್ತರ ಛಿದ್ರಗಳನ್ನೆಂದೂ ಕಿವಿಯಲ್ಲಿ ಕೇಳಬಾರದು.

**ರಾಮಸಿಂಗ.**—ನಿಜವಾಗಿಯೂ ಛಿದ್ರಗಳೇ ಆಗಿದ್ದರೆ ಕೇಳಲೇಬೇಕು.

**ಮಿಶ್ರ.**—ಸಾಧ್ಯವಿಲ್ಲ ರಾಮಸಿಂಗ ಅದನ್ನು ಈ ನಾಲಗೆಯಿಂದ ಹೇಳುವುದಕ್ಕೆ. ನೀವಿಬ್ಬರೂ ಪರಮ ಸ್ನೇಹಿತರು.

**ರಾಮಸಿಂಗ.**—ಹೇಳುವ ನಾಲಗೆ ಇದಲ್ಲ, ಬೇರೆ ಎಂದು ಭಾವಿಸಿ ಕೊಳ್ಳಿ, ಮತ್ತೆ ಹೇಳಿ.

**ಮಿಶ್ರ.**—ಅದಾಗದು ಗೆಳೆಯರಲ್ಲಿ ಕಲಹವನ್ನು ಬಿತ್ತುವ ಪ್ರಸಂಗ!

**ರಾಮಸಿಂಗ** (ಆತ್ಮಗತ).—ಈ ದುಷ್ಟ ಬ್ರಾಹ್ಮಣನಿಗೆ ಏನೋ ಭೇದ ಹೂಡಬೇಕೆಂದಿದೆ. ಆದುದರಿಂದಲೇ ಈ ಮುರುಳುನಯ; ಇರಲಿ. (ಪ್ರಕಾಶ) ಹಾಗಾದರೆ ನಿಮ್ಮ ಬೇಸರಕ್ಕೆ ಕಾರಣ ನಮ್ಮವರು, ನಮ್ಮ ಆಪ್ತರು, ಎಂದಾಯಿತು.

**ಮಿಶ್ರ.**—ಹೇಗೆ ಬೇಕಾದರೂ ಆಗಲಿ; ಸತ್ಯವನ್ನಾದರೂ ಬೇಡದ್ದಲ್ಲಿ ಹೇಳಿದರೆ, ಅದಕ್ಕೆ ಚಾಡಿಯೆಂದು ಹೆಸರು.

**ರಾಮಸಿಂಗ.**—ನನಗೆ ಬೇಕಾಗಿದೆ ಈ ಸತ್ಯ.

**ಮಿಶ್ರ.**—ಹಾಗಾದರೆ ಇದು ಚಾಡಿಯಲ್ಲವೆಂದು ನಿನ್ನ ಅಭಿಪ್ರಾಯ ವಲ್ಲವೇ ?

**ರಾಮಸಿಂಗ.**—ಹಾಗೆಯೇ ಸರಿ.

**ಮಿಶ್ರ.**—ಮತ್ತೆ ದೂರಬಾರದು. ಅಲ್ಲ. ದೂರಿದರೇನೂ ಆಕಾಶವು ಹರಿದು ತಲೆಯ ಮೇಲೆ ಬೀಳಲಾರದು. ಆದರೂ ದೂರು ಬೇಡ.

**ರಾಮಸಿಂಗ.**—ಹೇಳುವುದಿದ್ದರೆ ಹೇಳಿರಿ, ಮಿಶ್ರರೇ! ಇಲ್ಲವಾದರೆ....

**ಮಿಶ್ರ.**—ಶಾರ್ದೂಲ ಸಿಂಗನಂಥವರೇ ತಂಟೆಗೆ ಹೊರಟರೆ ನಮ್ಮಂಥ ವರ ಪಾಡೇನು ?

**ರಾಮಸಿಂಗ.**—ಅವನ ಅಪರಾಧವೇನು ?

**ಮಿಶ್ರ.**—ಅಯ್ಯಾ, ವೈದಿಕ ಬ್ರಾಹ್ಮಣರೇ! ತುರುಷ್ಕರಾಜನ ಕಾಲುಜ್ಜಿ ಮಾಂಸವೆಷ್ಟು ತಿನ್ನುತ್ತೀರಿ ? ಹೆಂಡವೆಷ್ಟು ಕುಡಿಯುತ್ತೀರಿ? ನಿಮಗೇಕೆ ಈ ಯಜ್ಞೋಪವೀತ ? ಕುತ್ತಿಗೆಗೆ ನೇಣು ಹಾಕಿಕೊಳ್ಳುವುದಕ್ಕೋ ? ಎಂದು ಮೊದಲಾಗಿ ಕೇಳಿದರೆ ಅದು ಅಪರಾಧ ಹೌದೊ ಅಲ್ಲವೊ ?

**ರಾಮಸಿಂಗ** (ಕಪಟರೋಷದಿಂದ ಕೆಂಪಾಗಿ).— **ಸಂದೇಹವೇನು ?**

**ಮಿಶ್ರ.**—ಆದರೆ ಚಿಕ್ಕ ವಯಸ್ಸು. ಆದುದರಿಂದ ಸುಮ್ಮನೆ ಬಿಟ್ಟೆ.

**ರಾಮಸಿಂಗ.**—ವಯಸ್ಸು ಅಲ್ಪವಾದರೆ, ಬುದ್ಧಿಯೂ ಹಾಗಿರಬೇಕೆಂದಿಲ್ಲ.

**ಮಿಶ್ರ.**—ಭೇಷ್! ಸಾವಿರದಲ್ಲಿ ಒಂದು ಮಾತು.

**ರಾಮಸಿಂಗ.**—ಆದರೆ ಶಾರ್ದೂಲಸಿಂಗನ ಸ್ವಭಾವವು ನಿಮಗೆ ಮೊದಲಿನಿಂದಲೂ ಗೊತ್ತಿದೆ.

**ಮಿಶ್ರ.**—ಹುಂ; ಆತ ಮೂರು ಗೇಣುದ್ದದ ಪೋರನಾಗಿದ್ದ.

**ರಾಮಸಿಂಗ.**—ಇಂದು ತಾವು ಅಹಮ್ಮದ್‌ಶಹನ ಒಡ್ಡೋಲಗದ ಸೀಮಂತ ರತ್ನವಾಗಿದ್ದರೂ ನಿಮ್ಮ ಪೂಜ್ಯಪಿತೃಪಿತಾಮಹರು ನಮ್ಮಲ್ಲೇ ಹುಟ್ಟಿ ಬಳೆದವರು. ಅವರ ಪವಿತ್ರಹೋಮಧೂಮಗಳಿಂದ ನಮ್ಮ ರಾಜಗೃಹ ವೆಷ್ಟೋ ಪರಿಶುದ್ಧವಾಗಿದೆ. ಶಾರ್ದೂಲನ ಸ್ವಭಾವವು ಚಿಕ್ಕಂದಿನಲ್ಲಿಯೋ ಹಾಗೆ; ದೇಹ ಬಳೆದಂತೆ ಸ್ವಭಾವವೂ ಅದೇ ರೀತಿಯಲ್ಲಿ ಬಳೆಯಿತು.

**ಮಿಶ್ರ.**—ಅದು ಸರಿ. ಆದರೆ ಪಾತ್ರಾಪಾತ್ರವಿವೇಚನೆಯನ್ನು ಮಾಡಬೇಕಾಗಿದ್ದಿತಲ್ಲವೇ ?

**ರಾಮಸಿಂಗ.**—ಅವನು ವಿಚಾರಿಸಲಿಲ್ಲ. ನಾನು ವಿಚಾರಿಸುತ್ತೇನೆ.

**ಮಿಶ್ರ.**—ಅಹಮ್ಮದ್‌ಶಹನ ರಾಯಭಾರಿಯೆಂದಾದರೂ ಬಗೆಯಬೇಕಿತ್ತಲ್ಲವೇ ?

**ರಾಮಸಿಂಗ.**—ಅದರಲ್ಲಿ ಸಂದೇಹವೇನು ?

**ಮಿಶ್ರ.**—ಅಹಮ್ಮದ್‌ಶಹನೇ ನನ್ನನ್ನಿಲ್ಲಿಗೆ ಕಳುಹಿಸಿದ್ದಾನೆ.

**ರಾಮಸಿಂಗ.**—ತುರುಷ್ಕರಾಜನ ಮಂತ್ರಿಗಳಾದ ಮಧುಸೂದನ ಮಿಶ್ರರು ಸಾಕ್ಷಾತ್ ನಿಂತಿರುವರು; ಸತ್ಯವಿದು.

**ಮಿಶ್ರ.**—ಮುಂದಿನ ವಿಚಾರವೆಲ್ಲಾ ನಿನ್ನ ಜನಕನೊಡನೆ.

**ರಾಮಸಿಂಗ.**—ಮಗನಲ್ಲಿ ಹೇಳಬಾರದ ಗುಟ್ಟು!

**ಮಿಶ್ರ.**—ಇದು ಮಕ್ಕಳ ಕೆಲಸವಲ್ಲ; ಹಿರಿಯರ ಕೆಲಸ.

**ರಾಮಸಿಂಗ.**—ಹಿರಿಯರ ದರ್ಶನ ದೊರೆಯದಿದ್ದರೆ ?

**ಮಿಶ್ರ.**—ದರ್ಶನ ದೊರೆಯುವುದಿಲ್ಲ ಎಂಬುದರ ಅರ್ಥವೇನು ?

**ರಾಮಸಿಂಗ.**—ರಾಜರು ತಮ್ಮನ್ನು ಅಸ್ಥಾನಕ್ಕೆ ಕರೆಯಿಸಿಕೊಳ್ಳು ವುದಿಲ್ಲವೆಂದು.

**ಮಿಶ್ರ.**—ಹಾಗೆಂದರೇನು? ಈ ಮಾತು ರಾಜನ ಬಾಯಿಯಿಂದ ಬಾರದು.

**ರಾಮಸಿಂಗ.**—ರಾಜರ ಚಿತ್ತವೃತ್ತಿ ತಮಗೊಬ್ಬರಿಗೆ ತಿಳಿದುದು.

**ಮಿಶ್ರ.**—ಅಹಮ್ಮದ್‌ಶಹನ ರಾಯಭಾರಿ ಬಂದಿದ್ದಾನೆ; ರಾಜನು ದರ್ಶನ ಕೊಡುವುದಿಲ್ಲವೆಂಬುದು ಸಟೆ.

**ರಾಮಸಿಂಗ.**—ಶಹನ ರಾಯಭಾರಿಯಾದರೆ ಏನಾಯಿತು?

**ಮಿಶ್ರ.**—ಆತನ ಹೆಸರನ್ನು ಕೇಳಿದೊಡನೆ ಸ್ವರ್ಗದ ಬಾಗಿಲು ತಾನಾಗಿ ತೆರೆಯುವುದು; ಸ್ವರ್ಗವಾಸಿಗಳು ತಾವಾಗಿ ಬಂದು ದರ್ಶನ ಮಾಡುವರು.

**ರಾಮಸಿಂಗ.**—ಹಾಗಾದರೆ ದರ್ಶನ ದೊರೆವಲ್ಲಿಗೆ ಹೋಗ ಬಹುದಲ್ಲ.

**ಮಿಶ್ರ.**—ಇದಕ್ಕೆ ಮತ್ತಾವ ಕಾರಣವೂ ಇಲ್ಲ. ನನ್ನ ಅಪೇಕ್ಷೆಯು ಹಿಂದೆ ಮುಂದಿಮಾರ್ಬಲವುಂಟು.

**ರಾಮಸಿಂಗ.**—ಅದನ್ನು ತಂದೇ ರಾಜರನ್ನು ಕಾಣಬಹುದಲ್ಲ! ಖಂಡಿತವಾಗಿಯೂ ನಿಮಗೆ ಪ್ರವೇಶ ದೊರೆಯುವುದಿಲ್ಲ, ಮಿಶ್ರಮಹಾನು ಭಾವರೆ!

**ಮಿಶ್ರ.**—ಇದೀಗ ರಜಪೂತಧರ್ಮ!

**ರಾಮಸಿಂಗ.**—ಇದು ತುರುಷ್ಕ ರಾಜ್ಯವಲ್ಲ. ಪ್ರತಿಯೊಂದು ಮನೆಯೊಳಗೂ ಸಿಂಹದ ಮರಿಗಳೇ ವಾಸಿಸುತ್ತಿರುವುವು!

**ಮಿಶ್ರ.**—ಹಾಗಾದರೆ ಹಾಗೆಯೇ ಹೇಳಿಬಿಡುತ್ತೇನೆ ಶಹನಲ್ಲಿ—'ಇದು ರಜಪೂತರ ರಾಜ್ಯ, ಮನೆಯೊಳಗೆ ಮನುಷ್ಯರಿಲ್ಲ, ಸಿಂಹದ ಮರಿಗಳಿವೆ, ರಾಜದರ್ಶನ ದೊರೆಯಲಾರದು' ಎಂದು ಬಿನ್ನೈಸಿಕೊಳ್ಳುತ್ತೇನೆ, ಆಗದೇ?

**ರಾಮಸಿಂಗ.**—ಏನಾದರೂ ಕಾರ್ಯವಿದ್ದರೆ ಹೇಳಬಹುದು; ಇಲ್ಲವಾದರೆ ಹೋಗಬಹುದು. ಕೋಟೆಯ ಬಾಗಿಲು ತೆರೆದೇ ಇದೆ (ಎಂದು ಮುಖ ತಿರುಗಿಸುವನು).

**ಮಿಶ್ರ.**—ಬಂದುದು ಘನವಾದ ರಾಜಕಾರ್ಯದಿಂದ. ಕೃತಾರ್ಥನಾಗದೆ ಹೋದರೆ ಶಹನು ಏನೆನ್ನುವನೋ!

**ರಾಮಸಿಂಗ.**—ಅದು ನಮ್ಮ ವಿಚಾರವಲ್ಲ.

**ಮಿಶ್ರ.**—ನಿಮ್ಮದಲ್ಲದಿದ್ದರೂ ನಮ್ಮ ವಿಚಾರ ಅವೇ. ಹುಂ, ಆಗಲಿ; ಹೇಳಿಬಿಡುತ್ತೇನೆ.

**ರಾಮಸಿಂಗ.**—ಕುತೂಹಲವಿದ್ದರೆ ಮಾತ್ರ ಹೇಳಬಹುದು.

**ಮಿಶ್ರ.**—ಮತ್ತೇನೂ ಇಲ್ಲ. ನಾನು ಕನ್ಯಾರ್ಥಿಯಾಗಿ ಬಂದುದು.

**ರಾಮಸಿಂಗ.**—ಆಶ್ಚರ್ಯ! ಇಂತಹ ಪರಿಶುದ್ಧಬ್ರಾಹ್ಮಣರನ್ನು ಮದಿರಾಕ್ಷಿಯರಾರೂ ಅಲ್ಲಿ ಮೋಹಿಸಲಿಲ್ಲವೇ?

**ಮಿಶ್ರ.**—ಆ ಕಥೆ ಬೇರೆ; ಈಗ ನಾನು ಬಂದುದು ಕನ್ಯಾರ್ಥಿಯಾಗಿ.

**ರಾಮಸಿಂಗ.**—ಯೋಗ್ಯವ್ಯವಸಾಯವಿದು. ಮ್ಲೇಚ್ಛಮದಿರಾಕ್ಷಿಯರಲ್ಲಿ ಅಪೇಕ್ಷೆಯನ್ನಿಡದೆ—

**ಮಿಶ್ರ.**—ಹಾಗಲ್ಲ ರಾಜಕುಮಾರ; ಮದುವೆ ನನಗಲ್ಲ. ನನಗೆ ಈ ಪ್ರಾಯದಲ್ಲಿ ಮದಿರೆಯೂ ಬೇಡ, ಮದಿರಾಕ್ಷಿಯರೂ ಬೇಡ.

**ರಾಮಸಿಂಗ.**—ಈ ಬ್ರಾಹ್ಮಣಶಿಖಾಮಣಿಗಳಿಗೆ ಪುತ್ರರತ್ನವುಂಟೇ?

**ಮಿಶ್ರ** (ನಿಟ್ಟುಸಿರು ಬಿಡುತ್ತಾ ಗದ್ಗದ ಕಂಠದಲ್ಲಿ).—ಹಾ! ಆ ಪುಣ್ಯ ನನ್ನಂತಹ ಪಾಪಿಗೆಲ್ಲಿ?

**ರಾಮಸಿಂಗ.**—ಹಾಗಾದರೆ ಮದುವೆ ಯಾರಿಗೆ? ಹುಡುಗಿ ಯಾರಿಗೆ?

**ಮಿಶ್ರ.**—ಮದುವೆಯೂ ಹುಡುಗಿಯೂ ಒಬ್ಬನಿಗೆ.

**ರಾಮಸಿಂಗ.**—ಹಾಗೆಂದರೆ?

**ಮಿಶ್ರ.**—ಈ ರಾಜ್ಯವೆಲ್ಲಾ ಯಾರ ಏಕಚ್ಛತ್ರದ ನೆಳಲಲ್ಲಿರುವುದೋ ಆತನಿಗೆ ಕನ್ಯೆ.

**ರಾಮಸಿಂಗ.**—ಮೂರ್ಖ ಬ್ರಾಹ್ಮಣ! ಏನು ಹೇಳಿದೆ?

**ಮಿಶ್ರ.**—ನನ್ನ ಮಾತಿಗೆ ಅರ್ಥವಾಗಲಿಲ್ಲವೇ? ಅಹಮ್ಮದ್ ಶಹನಿಗೆ ಮದುವೆಯಾಗಬೇಕೆಂಬ ನವೋತ್ಸಾಹವುಂಟಾಗಿದೆ. ಕನ್ಯಾದರ್ಶನಕ್ಕಾಗಿ ಇಲ್ಲಿಗೆ ಬಂದಿರುವೆನು.

**ರಾಮಸಿಂಗ.**—ಇಲ್ಲಿಗೂ ಬರುವ ಧೈರ್ಯ ನಿನಗೆ!

**ಮಿಶ್ರ.**—ಒಳ್ಳೆಯ ಸಂಬಂಧವನ್ನು ಮಾಡಿಸುವುದಕ್ಕೆ ಎಲ್ಲಿಯೂ ಧೈರ್ಯವೇ ಸರಿ.

**ರಾಮಸಿಂಗ.**—ದಾರಿಯಲ್ಲಿ ಅಲೆದಾಡುವ ತಿರುಕನೊಡನೆ ಕೇಳು. ಆತನೂ ಹುಡುಗಿಯನ್ನು ಕೊಡಲಾರನು.

**ಮಿಶ್ರ.**—ಹಾಗೆ ಕೇಳುವ ಪ್ರಸಂಗವೇ ಇಲ್ಲ, ರಾಜಕುಮಾರ.

**ರಾಮಸಿಂಗ.**—ಕೂಡಲೇ ಹೊರಟು ಹೋಗು.

**ಮಿಶ್ರ.**—ಅಷ್ಟು ಸುಲಭವಾಗಿ ಮಾತು ಮುಗಿಸಿದರೆ ಸಾಲದು, ಕುಮಾರ!

**ರಾಮಸಿಂಗ.**—ಇಲ್ಲಿರುವುದು ರಜಪೂತ ಸ್ತ್ರೀರತ್ನಗಳು; ಯವನ ದಾಸಿಯರಲ್ಲ. ಇವರ ನಾಡಿಗಳಲ್ಲಿ ಹರಿಯುವುದು ಆರ್ಷಸಂತತಿಯ ಪವಿತ್ರ ರಕ್ತ; ಮದಿರಾವೇಶದಿಂದ ಸಂಚರಿಸುವ ರಕ್ತವಲ್ಲ.

**ಮಿಶ್ರ.**—ರಕ್ತಪರೀಕ್ಷೆಯನ್ನು ವೈದ್ಯರಿಂದ ಮಾಡಿಸಿಕೊಳ್ಳೋಣ. ಈಗ ಬೇಕಾದುದು ಕನ್ಯಾಪರೀಕ್ಷೆ! ಕನ್ಯೆ! ಹೆಣ್ಣು!

**ರಾಮಸಿಂಗ.**—ಅದು ಸಾಧ್ಯವಿಲ್ಲ.

**ಮಿಶ್ರ.**—ಯಾಕೆ ಸಾಧ್ಯವಿಲ್ಲ? ನಿನಗೊಬ್ಬಳು ತಂಗಿಯಿದ್ದಾಳೆ.

**ರಾಮಸಿಂಗ.**—ಹೌದು; ಈ ಖಡ್ಗಧಾರೆಯ ಮೇಲೆ ಕುಣಿದಾಡಿದವಳು (ಎಂದು ಖಡ್ಗಕ್ಕೆ ಕೈಹಾಕುತ್ತಾನೆ).

**ಮಿಶ್ರ.**—ಅವಳಿಗೆ ಹದಿನಾರು ವರ್ಷವಾಯಿತು.

**ರಾಮಸಿಂಗ.**—ಬ್ರಾಹ್ಮಣ; ನಿನಗೆ ಜೀವದ ಮೇಲೆ ಆಸೆಯಿದೆಯೇ?

**ಮಿಶ್ರ.**—ನನ್ನ ಜೀವದಾತೃಗಳು ಬೇರೆ ಜನರಿದ್ದಾರೆ. ಅದನ್ನು ನಾನೇ ವಿಚಾರಿಸಿಕೊಳ್ಳುತ್ತೇನೆ. ಈಗ ಬೇಕಾದುದು ನಾರೀರತ್ನ!

**ರಾಮಸಿಂಗ.**—ಹಾಗಾದರೆ ನಿನ್ನ ತಾಯ್ತಂದೆಗಳು ಬರಲಿ; ನೋಡುತ್ತೇನೆ (ಎಂದು ಕೈಹಿಡಿದು ಎಳೆಯುತ್ತಾನೆ. ಅಷ್ಟರಲ್ಲಿ ಸಾಧ್ವಸವಾಗಿ ವಿಕ್ರಮನ ಪ್ರವೇಶವಾಗುವುದು).

**ವಿಕ್ರಮ.**—ರಾಜಕುಮಾರ! ಎಂತಹ ಕೋಪಾಟೋಪ!

**ರಾಮಸಿಂಗ.**—ಈಗ ಕೋಪವಿಲ್ಲದವರು ಪಶುಗಳು.

**ವಿಕ್ರಮ.**—ಅಸ್ಥಾನದಲ್ಲಿ ಆಯಿತು ನಿನ್ನ ಕೋಪ.

**ರಾಮಸಿಂಗ.**—ಇದು ಅಸ್ಥಾನವಲ್ಲ. ಸಂಸ್ಥಾನ.

**ವಿಕ್ರಮ.**—ಬ್ರಾಹ್ಮಣರನ್ನು ಪೀಡಿಸಬಹುದೇ ?

**ರಾಮಸಿಂಗ.**—ಇದು ಬ್ರಹ್ಮಧರ್ಮದ ಪರಿರಕ್ಷಣೆ.

**ವಿಕ್ರಮ.**—ರಾಜರು ನಿನ್ನ ಆಗಮನವನ್ನು ಅಪೇಕ್ಷಿಸಿದ್ದಾರೆ.

**ರಾಮಸಿಂಗ.**—ತಡವಿಲ್ಲ. ಈತನನ್ನು ಕತ್ತಲೆಕೋಣೆಗೆ ನೂಕಿ ಹೊರಡುವೆನು.

**ಮಿಶ್ರ.**—ಕತ್ತಲೆಕೋಣೆ! ಒಳ್ಳೆಯ ಮರ್ಯಾದೆ ರಾಜಮಂತ್ರಿಗೆ!

**ವಿಕ್ರಮ.**—ವಿಲಂಬಿಸಬಾರದು. ಏನೋ ಅವಶ್ಯಕಾರ್ಯವಿದೆ ಯಂತೆ.

**ರಾಮಸಿಂಗ.**—ಇವನನ್ನೇನು ಮಾಡಲಿ ?

**ವಿಕ್ರಮ.**—ನನಗೆ ಬಿಡು.

**ರಾಮಸಿಂಗ.**—ಇದು ನನ್ನ ಬೇಟೆಯ ಕೊಳ್ಳೆ. ನಾನು ಬರುವ ವರೆಗೆ ಹಾಗೆಯೇ ಇಟ್ಟಿರಬೇಕು, ತಿಳಿಯಿತೇ ?

**ವಿಕ್ರಮ.**—ಹುಂ; ಸಂದೇಹವೇನು? (ರಾಮಸಿಂಗನು ಹೋಗುವನು. ಮಿಶ್ರನ ಕಡೆಗೆ ನೋಡಿ) ಬ್ರಾಹ್ಮಣ ಏನಿದು? ಯಾವ ಅನಿಷ್ಟವಾರ್ತೆಯನ್ನು ತಂದುದರಿಂದ ಈ ಅವಸ್ಥೆ ಬಂತು ?

**ಮಿಶ್ರ.**—ಒಂದು ಚಿಕ್ಕಿಲಿ ಯಾವ ವಾರ್ತೆಯನ್ನು ತಂದರೂ ಸರಿ; ಬೆಕ್ಕು ಅದರ ಮೇಲೆ ಹಾರದೆ ಬಿಡುವುದೇ ? ಉಗುರಿನಿಂದ ಪರಚದೆ ಬಿಡುವುದೇ ?

**ವಿಕ್ರಮ** (ನಗುತ್ತಾ).—ವ್ಯಸನವಾಗುತ್ತದೆ, ಬ್ರಾಹ್ಮಣ ಬಾ ನನ್ನ ಸಂಗಡ.

**ಮಿಶ್ರ.**—ವ್ಯಸನವಾಗುವವರಿಗೆ ನಗೆಬರುವುದಿಲ್ಲ. ಆದರೂ ಬರುತ್ತೇನೆ ನಿನ್ನ ಸಂಗಡ (ಎಂದು ಹೋಗುವನು).

## ದೃಶ್ಯ ೨

ಸಂಜೆ. ಇಂದಿರಾದೇವಿ ಅಂತಃಪುರದಲ್ಲಿ ಕುಳಿತಿರುವಳು ಚಿಕ್ಕ ದೀಪವೊಂದು ಮಿಣಿಮಿಣಿ ಉರಿಯುತ್ತಿದೆ.

**ಇಂದಿರಾ** (ಚಿಂತಾಭಾವದಲ್ಲಿ).—ಇದೆಂತಹ ಸಂಜೆ! ನನ್ನ ಜೀವವೇ ಮುದುರುತ್ತಿದೆ; ಹಾರಿಬಂದು ಗೂಡೊಳಗೆ ಸೇರುವ ಹಕ್ಕಿಯಂತೆ ರೆಕ್ಕೆ ಹೊಡೆಯುತ್ತಿದೆ; ಎಲ್ಲಾದರೊಂದೆಡೆ ಅವಿತಿರೋಣ ಎಂದು ಹಳವಳಿಸುತ್ತಿದೆ. ಆ ಮರದ ನೆರಳಲ್ಲಿ, ಈ ಗೋಡೆಯ ಪಕ್ಕದಲ್ಲಿ, ಆ ಹಕ್ಕಿಯ ಗೂಡಿನೊಳಗೆ, ಈ ಗವಿಯ ಬೀಡಿನೊಳಗೆ, ಅಲ್ಲಲ್ಲಿ ನಿಂತು, ಅಲ್ಲಲ್ಲಿ ಅವಿತು, ಅಲ್ಲಲ್ಲಿ ಹೊಂಚು ಹಾಕಿ ಈ ಕತ್ತಲೆ ಯಾರನ್ನು ಅರಸುವುದೋ ಯಾರನ್ನು ನುಂಗಲೆಂದು ಬೆರಸುವುದೋ ತಿಳಿಯುವುದಿಲ್ಲ. ಬರಿಯ ಶಾಂತಿಯಿದ್ದರೆ ವ್ಯಸನವಿರು ತ್ತಿರಲಿಲ್ಲ. ಅದು, ತೆರೆಯಿಲ್ಲದ ಶಾಂತಸರೋವರದಲ್ಲಿ ಈಜಾಡಿದ ಸುಖ ದಂತೆ. ಆದರೆ ಇದು ಅಂತಹ ಶಾಂತಿಯಲ್ಲ! ಒಂದು ನಿಮಿಷದ ಹಿಂದೆ ಜೀವಕೋಟಿಯ ಬೊಬ್ಬೆಯನ್ನು ಕೇಳಿದೆನು. ಅದು ಈಗ ಕಡಿಮೆಯಾಗಿ ಮೆಲ್ಲ ಮೆಲ್ಲನೆ ಕೇಳದಾಯಿತು. ಆದುದರಿಂದಲೇ ಇದರೊಳಗೇನೋ ಸುಳಿ ಯಿದೆ, ಜನರ ಕಾಲನ್ನು ಕೊರೆವ ಸೆಳವಿದೆ ಎಂದು ಭಾವಿಸಬೇಕಾಗುತ್ತದೆ. ಅಲ್ಲಲ್ಲಿ ಗೂಗೆಗಳ ಶಬ್ದ. ಕತ್ತಲೆಯ ತೆರೆಯದು, ಶಾಂತಿಸಮುದ್ರದ ಸುಳಿಯದು. ಸಂಜೆಯ ಗಾಳಿ ಎಂದಿನಂತಿಲ್ಲ, ಅತಿಶೀತಲವಾಗಿದೆ. ತಂಗಾಳಿ ಯಲ್ಲಿಯೂ ಸೌರಭ್ಯವಿರುವುದುಂಟು. ಇಂದಿನ ಗಾಳಿ ಏಕೋ ಹೀಗೆ ಶೀತಲವಾಗಿದ್ದರೂ ಎದೆಯುರಿಯನ್ನು ಊದಿ ಕಿಡಿಗೆದರಿಸುತ್ತಿರುವುದು. ಅಥವಾ ಪ್ರಕೃತಿಯು ಇದ್ದಂತೆಯೇ ಇದೆ. ಇದುವರೆಗೆ ಎಷ್ಟು ಸಂಜೆಗಳು ಬರಲಿಲ್ಲ! ಎಷ್ಟು ಶೀತವಾಯು ಬೀಸಲಿಲ್ಲ! ಇಂದು ಮಾತ್ರ ನನ್ನೆದೆಗೆ ಉಮ್ಮಳ. ಕಾರಣವಿಷ್ಟು, ಮೊದಲು ಪ್ರಕೃತಿಯ ಹಾಡಿಗೆ ಸರಿಯಾಗಿ ತಾಳಹಾಕಿ, ಅದರ ಆನಂದಾನುಭವದ ಅತಿರೇಕದಿಂದ ಮೈಮರೆತು ಹೃದಯವು ಮೇಳಗೂಡಿ ಕುಣಿಯುತ್ತಿದ್ದಿತು. ಆದರೆ ಈಗ ಹಾಗಿಲ್ಲ. ತಾಳ ತಪ್ಪಿದೆ; ಎದೆ ಕುಣಿಯುವುದಿಲ್ಲ; ಹಿಂದೆ ನಿಂತಿದೆ. ಆದುದರಿಂದಲೇ ಎಂದೂ ತಪ್ಪಿಬೀಳದ ಪ್ರಕೃತಿಯ ತಾಳಬದ್ಧಸಂಗೀತವನ್ನು ಕೇಳಿ ಹೃದ ಯಕ್ಕೆ ವ್ಯಸನವೊಮ್ಮೆ ಮತ್ಸರವೊಮ್ಮೆ ಆಗುವುದರಿಂದಲೇ ಇಂತಹ ಅವಸ್ಥೆ.

ಇದರ ಕಾರಣವನ್ನು ನಮ್ಮಲ್ಲೇ ಹುಡುಕಬೇಕಲ್ಲದೆ, ತಂಗಾಳಿಯಲ್ಲಿಯೂ ಹಕ್ಕಿಗಳ ಹಾಡಿನಲ್ಲಿಯೂ ಸಂಜೆಯ ನೆಳಲಲ್ಲಿಯೂ ಅರಸುವುದು ಶುದ್ಧ ಮೂಢತೆ. ಹೋಗಲಿ ಇಂತಹ ಶುಷ್ಕ ವಿಚಾರ! (ಒದ್ದೆಗಣ್ಣನ್ನೊರಸಿ) ರಾಮ ಸಿಂಗನನ್ನು ಬರಹೇಳಿದ್ದೆ; ಯಾಕೆ ಬರಲಿಲ್ಲ ?

[ರಾಮಸಿಂಗನು ಓಡುತ್ತಾ ಬಂದು ಪಾದಕ್ಕೆ ಬೀಳುವನು.]

**ರಾಮಸಿಂಗ.**—ತಾಯೇ! ಹೇಳುವುದೇನು ? ಎಲ್ಲಾ ಅನರ್ಥ

[ಇಂದಿರೆಯು ಅವಸರದಿಂದ ಹಿಡಿದೆತ್ತುವಳು.]

**ಇಂದಿರೆ.**—ಏನು ಮಗು, ಇಂದೇಕೆ ನಿನ್ನ ಮುಖಕ್ಕೆ ಇಷ್ಟು ಭಯಂಕರತೆ!

**ರಾಮಸಿಂಗ.**—ಮುಖವೆಂದೇನು? ಜೀವನವೇ ಭಯಂಕರವಾಗಿದೆ!

**ಇಂದಿರೆ.**—ಇಲ್ಲ ಮಗು; ಸ್ವಲ್ಪ ಸಮಾಧಾನ ತಾಳು; ಎಲ್ಲವನ್ನೂ ವಿಸ್ತರವಾಗಿ ಹೇಳು.

**ರಾಮಸಿಂಗ.**—ಹೇಳುವುದಕ್ಕೆ ಬಾಯಿ ಬಾರದು. ವಿಸ್ತರವಾಗಿ ಹೇಳುವ ಪ್ರಸಂಗವೆಲ್ಲಿ ?

**ಇಂದಿರೆ.**—ಹೇಳದಿದ್ದರೆ ಅನಿಷ್ಟ ಹೆಚ್ಚು.

**ರಾಮಸಿಂಗ.**—ಇದಕ್ಕಿಂತ ಹೆಚ್ಚಿನ ಕಷ್ಟವೇನು ತಾಯಿ ? ಆಗ ಬಾರದ ಸಂಗತಿ ಆಗಿ ಹೋಯಿತು. ನಿಮ್ಮಂಥವರು ಇದನ್ನು ಕೇಳ ಲಾಗದು.

**ಇಂದಿರೆ.**—ಕೇಳುವುದರಲ್ಲಿ ಪಾಪವೇನೂ ಇಲ್ಲ

**ರಾಮಸಿಂಗ.**—ರಜಪೂತರಾಜನ ಕೈಹಿಡಿದು, ವೀರಮಾತೆಯಾಗಿ ಈ ಹೇಸಿಗೆಸುದ್ದಿಯನ್ನು ಕೇಳುವುದೇ ?

**ಇಂದಿರೆ.**—ಸುದ್ದಿಯಲ್ಲಿ ಹೇಸಿಗೆಯೇನು ? ಸೊಬಗೇನು ? ಅಂತಹ ಸ್ಥಿತಿಯಿರುವುದು ವಾರ್ತೆಯಲ್ಲಿ ಅಲ್ಲ, ಕಾರ್ಯದಲ್ಲಿ.

**ರಾಮಸಿಂಗ.**—ಹಾಗಾದರೆ ಕೇಳು.

**ಇಂದಿರೆ.**—ಹುಂ; ಹೇಳು.

**ರಾಮಸಿಂಗ.**—ಎದೆ ಮಾತ್ರ ಕಬ್ಬಿಣವಾಗಲಿ!

**ಇಂದಿರೆ.**—ಹೇಳುವುದನ್ನು ವಿಲಂಬಿಸಿ ಕೊಲ್ಲಬೇಡ, ಮಗು!

**ರಾಮಸಿಂಗ.**—ಆಯಿತು. ಹೇಳದೆ ಕೊಲ್ಲುವುದಿಲ್ಲ. ಹೇಳಿ ಕೊಲ್ಲುತ್ತೇನೆ.

**ಇಂದಿರೆ.**—ನಿನ್ನ ಮಾತಿನ ಅರ್ಥ ನನಗೆ ತಿಳಿಯದು.

**ರಾಮಸಿಂಗ.**—ಮಾತಿಗೆ ಅರ್ಥವಾಗುವುದೇನೂ ಕಷ್ಟವಲ್ಲ. ನಡತೆಗೆ ಅರ್ಥವಾಗುವುದು ಕಷ್ಟ. ಇದುವರೆಗೆ ರಾಜಸಿಂಹದ ಹೊಟ್ಟೆಯಲ್ಲಿ ಹುಟ್ಟಿದ ಕಿಶೋರಕೇಸರಿ ಎಂಬ ದರ್ಪವು ನನಗಿತ್ತು. ಈಗಲಿದೂ ಇಲ್ಲ, ಒಂದು ಪೆಕ್ಕಿನ ಮರಿ ನಾನು.

**ಇಂದಿರೆ.**—ಕುಲಪ್ರದೀಪ! ಜನಕನನ್ನು ಅಪಮಾನಿಸಬೇಡ.

**ರಾಮಸಿಂಗ.**—ಮಾನವನ್ನು ಕೊಡುವುದು, ಕೊಳ್ಳುವುದು; ಎಂದುಂಟೇ ತಾಯಿ? ಅವರವರ ಮಾನಕ್ಕೆ ಅವರವರೇ ಹೊಣೆ. ಅದಿಲ್ಲದಿದ್ದರೆ ಕುಲವೂ ಇಲ್ಲ, ಪ್ರದೀಪವೂ ಇಲ್ಲ!

**ಇಂದಿರೆ.**—ಏನಾಯಿತು? ಹೇಳು.

**ರಾಮಸಿಂಗ.**—ನಾಳೆ ನೀನು ಅಹಮ್ಮದ್‌ಶಹನ ಅತ್ತೆಯಾಗುವೆ.

**ಇಂದಿರೆ** (ಆಶ್ಚರ್ಯದಿಂದ).—ಏನು ಹುಚ್ಚೇ ನಿನಗೆ!

**ರಾಮಸಿಂಗ.**—ಶುಭಮುಹೂರ್ತವನ್ನು ನೋಡುವುದೊಂದೇ ತಡ. ನಮ್ಮ ಲೀಲೆ ಯವನರಾಜನ ಅರ್ಧಾಂಗಿಯಾಗುವಳು. ಈ ಕೋಗಿಲೆಯ ಮರಿಯನ್ನು ಆ ಕಾಗೆಯ ಗೂಡಿಗೆ ಹೊಡೆದೋಡಿಸುವರು.

**ಇಂದಿರೆ.**—ಇದು ಸುಳ್ಳು. ನಿನಗೆ ಹುಚ್ಚು!

**ರಾಮಸಿಂಗ.**—ಹುಚ್ಚು ನನಗಲ್ಲ, ತಾಯಿ! ತಂದೆಗೆ!

**ಇಂದಿರೆ.**—ಮೂರ್ಖ, ಪಿತೃನಿಂದೆಯನ್ನು ಮಾಡುವೆಯಾ?

**ರಾಮಸಿಂಗ.**—ಇದ್ದುದನ್ನು ಇದ್ದಂತೆ ಹೇಳಿದರೆ ಅದು ಪರನಿಂದೆಯಲ್ಲ. ಆದರೆ ಯಥಾರ್ಥವನ್ನು ಕೇಳುವುದಕ್ಕೆ ಯಾರ ಮನಸ್ಸೂ ಒಪ್ಪುವುದಿಲ್ಲವಾದುದರಿಂದ, ಹೇಳುವವರು ಪರನಿಂದಕರಾಗುತ್ತಾರೆ.

**ಇಂದಿರೆ.**—ಏನಾಯಿತೋ ನನಗೊಂದೂ ತಿಳಿಯುವುದಿಲ್ಲ.

**ರಾಮಸಿಂಗ.**—ಹಾಗಾದರೆ ಕೇಳು ತಾಯಿ. ಅಹಮ್ಮದ್‌ಶಹನ ಕಡೆಯಿಂದ ಒಬ್ಬ ಬ್ರಾಹ್ಮಣನು ಬಂದಿದ್ದಾನೆ ಕನ್ಯಾರ್ಥಿಯಾಗಿ. ರಾಜದರ್ಶನ

ವಾಯಿತು. ಲೀಲಾವತಿಯನ್ನು 'ಶಹನ ಪಟ್ಟದರಸಿಯನ್ನಾಗಿ ಮಾಡು ಎಂದು ಕೇಳಿದುದೇ ತಡ, ನನ್ನ ತಂದೆಯ ಕೆನ್ನೆ ಕೆಂಪೇರಿತು. ಸಹಜ; ನಮಗೆ ಯೋಗ್ಯಸಂಬಂಧವು ಈಗೆಲ್ಲಿ ದೊರೆತೀತು. ರಜಪೂತವಂಶವು ಸರ್ವತ್ರ ನಿರ್ಮೂಲವಾಗಿದೆ. ಇರುವವರಲ್ಲಿ ಯಾರಾದರೊಬ್ಬನಿಗೆ ಕೊಟ್ಟರೆ, ರಾಜಪಟ್ಟದ ಅರ್ಧಭಾಗವು ದೊರಕುವುದಿಲ್ಲ. ರಾಣಿಯೆಂಬ ಹೆಸರು ದೊರಕುವುದಿಲ್ಲ. ಲೀಲಾವತಿ ರಾಣಿಯಾಗ ಬೇಡವೇ? ನಾನು ಬೇರೆಡೆಗೆ ಹೋಗಿದ್ದೆ. ತಂದೆ ವಚನಕೊಟ್ಟು ಆಯಿತು.

**ಇಂದಿರೆ.**— ಇದೂ ಸತ್ಯವೇ ?

**ರಾಮಸಿಂಗ.**— ಸತ್ಯವೆಂದರೇನೋ ತಿಳಿಯದು; ನಡೆದ ಸಂಗತಿ ಹೀಗೆ.

**ಇಂದಿರೆ.**— ಮಾತು ಕೊಟ್ಟರು ?

**ರಾಮಸಿಂಗ.**— ಅವನ ಅಂಗೈಗೆ ತನ್ನ ಕೈಹೊಡೆದಾಯಿತು.

**ಇಂದಿರೆ.**— ಹೆತ್ತ ಕರುಳನ್ನು ಕೇಳದೆ. . . ?

**ರಾಮಸಿಂಗ.**— ತಾಯಿಗೆ ಹೇಳುವ ಕೆಲಸ ಮಾತ್ರ!

**ಇಂದಿರೆ.**— ಇದು ಸುಳ್ಳು ರಾಮಸಿಂಗ.

**ರಾಮಸಿಂಗ.**— ತಾಯಿ! ಎಷ್ಟೋ ಯುಗಾಂತರಗಳಿಂದ ತುಂಬಿ ಈ ಕಣ್ಣೀರಿನಲ್ಲಿ ಹರಿಯುವ ಪ್ರೇಮರಸವನ್ನು ಸುಮ್ಮನೆ ಸುಳ್ಳುಹೇಳಿ ಚೆಲ್ಲಿ ಬಿಡುವೆನೇ ?

**ಇಂದಿರೆ.** ರಜಪೂತಕುಲಕ್ಕೆ ಗ್ರಹಣ ಹಿಡಿಯಿತು.

**ರಾಮಸಿಂಗ.**— ಅನಂತಗ್ರಹಣ!

**ಇಂದಿರೆ.**— ರಾಮಸಿಂಗ! ಮಗು! ನನ್ನನ್ನು ಹಿಡಿದುಕೋ (ಎಂದು ಕೈಚಾಚುವಳು. ರಾಮಸಿಂಗನು ಹಿಡಿದುಕೊಳ್ಳುವನು).

**ಇಂದಿರೆ.**— ಕಣ್ಣುಗತ್ತಲೆ! ಜೀವಹೋಯಿತು. ಈ ದುರ್ವಾರ್ತೆಯನ್ನು ಕೇಳುವ ಮೊದಲೇ. . . . ಹೋಗಿದ್ದರೆ, . . (ಎಂದು ಮೂರ್ಛೆ ಹೋಗುವಳು).

**ರಾಮಸಿಂಗ.**— ಹಾ ನನ್ನ ಜೀವದಾತ್ರಿ! (ಎಂದು ಶೈತ್ಯೋಪಚಾರ ಮಾಡುವನು).

---

## ದೃಶ್ಯ ೩

[ಲೀಲಾವತಿಯ ಜನ್ಮದಿನ. ರಾಜನ ಒಡ್ಡೋಲಗ. ಪರ್ವತಸಿಂಗನು ಕುಳಿತಿದ್ದಾನೆ. ಬಲದಲ್ಲಿ ರಾಮಸಿಂಗ, ಎಡದಲ್ಲಿ ವಿಕ್ರಮಸಿಂಗ—ಇವರಿಬ್ಬರು ನಿಂತಿರುವರು. ಶಾರ್ದೂಲಸಿಂಗನು ಸ್ವಲ್ಪ ದೂರ ಕೈಕಟ್ಟಿ ನಿಂತಿರುವನು. ಸೇನಾಧಿಕಾರಿಗಳೂ ವೀರರೂ ಸಾಲಾಗಿ ನಿಂತಿರುವರು. ಪರ್ವತಸಿಂಗನು ಗಂಭೀರಸಖೇದಸ್ವರದಲ್ಲಿ ಮಾತಾಡುತ್ತಾನೆ.]

**ಪರ್ವತಸಿಂಗ.**—ನನ್ನ ಸರದಾರರೇ! ನಮ್ಮ ಕೀರ್ತಿ ಧ್ವಜಗಳೇ! ನಮ್ಮ ರಾಜ್ಯದ ಆಧಾರಸ್ತಂಭಗಳೇ!—ಪಂಚಪ್ರಾಣಗಳೇ! ಇಂದು ನಿಮ್ಮನ್ನು ಕರೆಯಿಸಿದ ಕಾರ್ಯವೇನೆಂದು ಗೊತ್ತಿರಬಹುದು.

**ಸರದಾರರು.**—ಮಹಾರಾಜರ ಅಪ್ಪಣೆಯಾಗಿದೆ; ಎಂದಿಷ್ಟೆ ಗೊತ್ತಿದ್ದರೆ ಸಾಕು.

**ಪರ್ವತಸಿಂಗ.**—ಇಂದು ಲೀಲಾವತಿಯ ಜನ್ಮದಿನ.

**ಸರದಾರರು.**—ಗೊತ್ತಿದೆ.

**ಪರ್ವತಸಿಂಗ.**—ಅಲ್ಲ; ರಜಪೂತರ ಪುನರ್ಜನ್ಮದ ದಿನ.

**ರಾಮಸಿಂಗ.**—ರಜಪೂತವೀರರ ನಾಡಿಗಳಲ್ಲಿನ್ನೂ ರಕ್ತ ಸಂಚಾರವಿದೆ. ಪ್ರಾಣಸಂಚಾರವಿದೆ. ಅವರಿನ್ನೂ ಸಾಯಲಿಲ್ಲ!

**ಪರ್ವತಸಿಂಗ.**—ಸತ್ತಿಲ್ಲದಿರಬಹುದು. ಆದರೆ ಅಭಿಮಾನಕ್ಕೆ ವಿನಾಶವೊದಗಿದೆ.

**ರಾಮಸಿಂಗ.**—ಎಂದೂ ಇಲ್ಲ.

**ಪರ್ವತಸಿಂಗ.**—ಇಲ್ಲದಿದ್ದರೆ ಅಹಮ್ಮದ್‌ಶಹನಿಂದ ಇಂತಹ ಬಿಭೀಷಿಕೆ ಏಕೆ ಬರಬೇಕು ?

**ರಾಮಸಿಂಗ.**—ರಜಪೂತರಲ್ಲಿ ಜೀವವಿದ್ದರೂ ಅವರು ಮೃತ್ಯು ನಿರೀಕ್ಷಣೆಯಿಂದ ಬೆದರಿ ಶವಗಳಂತೆ ಬಿದ್ದಿದ್ದರು.

**ಪರ್ವತಸಿಂಗ.**—ಇದನ್ನು ನಾವು ಸಹಿಸಲಾರೆವು. ನಮಗೆ ಅಪಮಾನಮಾಡುವ ಸಾಹಸದ ಮಾತು ಹಾಗಿರಲಿ. ರಜಪೂತನ ಕೈಯಲ್ಲಿ ಖಡ್ಗವಿರುವ ವರೆಗೆ ಅಂತಹ ಸ್ವಪ್ನವಾದರೂ ಆತನಿಗೆ ಬೀಳಬಾರದಿತ್ತು.

**ರಾಮಸಿಂಗ.**—ಓಹೊ ಇದು ವೀರತ್ವದ ಮಾತು. ಕೀರ್ತಿಶೇಷ ವಾದ ವೀರತ್ವ!

**ಪರ್ವತಸಿಂಗ.**—ಹಾಗಾದರೆ ಇಂದಿನವರು, ನಾವು ರಜಪೂತ ರಲ್ಲವೇ ?

**ರಾಮಸಿಂಗ.**—ರಜಪೂತರ ಮಕ್ಕಳಹುದು; ಮೊಮ್ಮಕ್ಕಳಹುದು.

**ಪರ್ವತಸಿಂಗ.**—ಆದುದರಿಂದಲೇ ರಜಪೂತರಂತೆ ಆಚರಿಸಬೇಕಾಗಿ ಬಂದಿದೆ.

**ರಾಮಸಿಂಗ.**—ಅದೇ ಸಂದಿಗ್ಧವಾದ ವಿಷಯ.

**ಪರ್ವತಸಿಂಗ.**—ಯಾವುದರಿಂದ ?

**ರಾಮಸಿಂಗ.**—ದೃಷ್ಟಿಯನ್ನು ಹಿಂದೆತಿರುಗಿಸಿ ಮುಂದೆ ನಡೆಯು ವುದಕ್ಕಾಗುವುದಿಲ್ಲ.

**ಪರ್ವತಸಿಂಗ.** ಹಿಂದೆಯೂ ಮುಂದೆಯೂ ದೃಷ್ಟಿಯಿದ್ದರೆ.

**ರಾಮಸಿಂಗ.**—ದುರ್ದೈವದಿಂದ—ಲೋಕದಲ್ಲಿ ಹುಟ್ಟುವ ಎಲ್ಲಾ ಜನರಿಗೆ—ನಾಮಧಾರಕರಿಗೆ ಆ ದೃಷ್ಟಿಗಳಿರುವುದಿಲ್ಲ. ಗತವೈಭವದ, ಪೂರ್ವಜರ ಪೌರುಷದ, ಪುಣ್ಯಸ್ಮರಣೆಯ ಸುಖಾನುಭವದಲ್ಲಿ ಓಲಾಡುತ್ತಿರು ವವರೇ ಹೆಚ್ಚು.

**ಪರ್ವತಸಿಂಗ.**—ಪೂರ್ವಸ್ಮರಣೆಯಿಂದಲೇ ಹುಟ್ಟಬೇಕು ಭವಿಷ್ಯ ತ್ಕಾಲ.

**ರಾಮಸಿಂಗ.**—ಅದು ಸರಿ. ಆದರೆ ಗತಯುಗದ ಕತ್ತಲೆಕೋಣೆ ಯೊಳಗೆ ಯಾವಾಗಲೂ ಗಬ್ಬಿಲದಂತೆ ನೇತಾಡುತ್ತಿರುವವರಿಗೆ, ಭವಿಷ್ಯತ್ತಿನ ಪ್ರಕಾಶಕ್ಕೆ ಬರಲು ಭೀತಿಯಾಗುತ್ತಿದೆ.

**ಪರ್ವತಸಿಂಗ.**—ಈ ಹಾಳುಹರಟೆಯಿಂದ ಪ್ರಯೋಜನವಿಲ್ಲ. ನೀವು ಇಷ್ಟು ಮಂದಿ ಇಲ್ಲಿ ನೆರೆದಿದ್ದೀರಿ. ಇವರಲ್ಲಿ ಒಬ್ಬನೂ ರಜಪೂತನಿಲ್ಲವೇ ?

**ರಾಮಸಿಂಗ.**—ಈ ಪಾಪಿಯುಗದಲ್ಲಿ ಆ ಪಾವನನಾಮವಾದರೂ ಎಲ್ಲಿದೆ ?

**ಪರ್ವತಸಿಂಗ.**—ಹಾಗಾದರೆ ನಾನು ಕೆಟ್ಟೆ. ನನ್ನ ಮುಂದೆ ನಿಂತಿರುವುದು ಮನುಷ್ಯರಲ್ಲ. ಅಷ್ಟು ಸಂಖ್ಯೆಯು ನೆಳಲುಗಳು.

**ರಾಮಸಿಂಗ.**—ಒಬ್ಬ ಅಹಮ್ಮದ್‌ಶಹ; ಮತ್ತೊಬ್ಬ ಮಧುಸೂದನ ಮಿಶ್ರ—ಹೀಗೆ ಇವರಿಬ್ಬರು ಚತುರೋಪಾಯಗಳಲ್ಲಿ ಸಾಮವನ್ನೇ ಹಿಡಿದು ರಾಜ್ಯಸೂತ್ರಗಳನ್ನು ನಡೆಯಿಸುತ್ತಿರುವಾಗ—ವೀರರ ಅವಶ್ಯಕತೆಯಿಲ್ಲ. ಊರು ತುಂಬ ನೆಳಲುಗಳಿದ್ದರೆ ಸಾಕು.

**ಪರ್ವತಸಿಂಗ.**—ಇದೇನು ರಾಮಸಿಂಗ, ವ್ಯಂಗ್ಯಭಾಷಣ.

**ರಾಮಸಿಂಗ.**—ಭಾಷಣಕ್ಕೆ ನಾಲಗೆ ಬರುವುದಿಲ್ಲ. ಆದರೆ ಹೃದಯವು ವ್ಯಥಿತವಾಗಿದೆ. ಮಾಡುವುದೇನು ? ಒಂದೊಂದು ಮಾತಾದರೂ ನಾಲಗೆಯಲ್ಲಿ ಹೊರಳಾಡುವಾಗ ಅದಕ್ಕೆ ವ್ಯಂಗತೆಯೇ ಬರುವುದು ಪ್ರಭು!

**ಪರ್ವತಸಿಂಗ** (ಸರ್ವರ ಕಡೆಗೆ ದೃಷ್ಟಿ ಪ್ರಸಾರಮಾಡಿ).—ವೀರರೆ! ನನ್ನ ಮಾತನ್ನು ಕೇಳಲು ಸಿದ್ಧರಾಗಿರಿ.

**ಸರದಾರರು.**—ಸಿದ್ಧರಾಗಿದ್ದೇವೆ, ಪ್ರಭು!

**ಪರ್ವತಸಿಂಗ.**—ಇಂದು ನಿಮ್ಮ ಹೆಡತಲೆಯಲ್ಲಿ ಕಾಳಸರ್ಪವಿದೆ, ಗೊತ್ತಿದೆಯೇ ?

**ಸರದಾರರು.**—ಹುಂ!

**ಪರ್ವತಸಿಂಗ.**—ಹೆಡೆಬಿಚ್ಚಿ ಬುಸುಗುಟ್ಟುತ್ತಿದೆ; ಗೊತ್ತಿದೆಯೇ ?

**ಸರದಾರರು.**—ಹುಂ.

**ಪರ್ವತಸಿಂಗ.**—ಲೋಕದ ಅನರ್ಘವಸ್ತುಗಳನ್ನು ಕವಳಿಸಬೇಕೆಂದು ತವಕಿಸುತ್ತದೆ; ಗೊತ್ತಿದೆಯೇ ?

**ಸರದಾರರು.**—ಗೊತ್ತಿಲ್ಲ ಪ್ರಭು!

**ಪರ್ವತಸಿಂಗ.**—ಲೀಲೆ ಹುಟ್ಟಿ ಇಂದಿಗೆ ೧೭ ವರ್ಷಗಳಾದುವು. ಇದುವರೆಗೂ ಅವಳ ವಿಷಯವಾಗಿ ಯಾವ ಚಿಂತೆಯೂ ಇರಲಿಲ್ಲ.

**ಸರದಾರ.**—ಹೌದು ಅವಳೇ ಲೋಕದ ಅನರ್ಘವಸ್ತು.

**ಪರ್ವತಸಿಂಗ.**—ಅವಳ ಮೇಲೆ ಈಗ ರಾಹುದೃಷ್ಟಿ ಬಿದ್ದಿದೆ. ಅಹ ಮ್ಮದ್ ಶಹನ ಹೃದಯದಲ್ಲಿ ಕಾಮವಾಸನೆ ಪ್ರದೀಪ್ತವಾಗಿದೆ.

**ಒಬ್ಬ.**—ಆತನನ್ನೇ ಭಸ್ಮೀಕರಿಸುವ ಜ್ವಾಲೆ.

**ರಾಮಸಿಂಗ.**—'ರಜಪೂತ' ಎಂಬ ನಾಲ್ಕಕ್ಷರಗಳು ಇರುವ ವರೆಗೆ ಹಾಗೆಯೇ.

**ಪರ್ವತಸಿಂಗ.**—ಸರದಾರರೇ! ಕೇಳಿರಿ. ಮಧುಸೂದನ ಮಿಶ್ರನು ಕುಮಾರಿಯನ್ನು ಶಹನಿಗೆ ಧಾರೆಯೆರೆದು ಕೊಡಬೇಕೆಂದು ಕೇಳಬಂದ ಸಂದೇಶಹರನು.

**ಸರದಾರರು.**—ನೀರಧಾರೆಯಲ್ಲ; ರಕ್ತಧಾರೆ.

**ರಾಮಸಿಂಗ.**—ಮಹಾರಾಜರೇ ತಡೆದರು. ಇಲ್ಲವಾದರೆ ಈ ಖಡ್ಗವು ಆತನ ರಕ್ತಪ್ರವಾಹದಲ್ಲಿ ತಿಮಿಂಗಿಲದಂತೆ ತೇಲಾಡುತ್ತಿದ್ದಿತು.

**ಪರ್ವತಸಿಂಗ.**—ಪರಾಕ್ರಮವನ್ನು ಚೆಲ್ಲುವುದೊಂದೇ ವೀರನ ಕರ್ತ ವ್ಯವಲ್ಲ. ದೇಶಕಾಲಗಳನ್ನು ನೋಡಬೇಕು.

**ರಾಮಸಿಂಗ.**—ಶಹನರಕ್ತಸಂಬಂಧವು ಯಾವ ದೇಶದಲ್ಲಿಯೂ ಯಾವ ಕಾಲದಲ್ಲಿಯೂ ಸಾಧ್ಯವಿಲ್ಲ.

**ಪರ್ವತಸಿಂಗ.**—ಯೌವನದ ಪರಾಕ್ರಮವೇ ಹಾಗೆ. ಬಿರುಗಾಳಿಗೆ ಸಿಕ್ಕಿದ ತರಗೆಲೆಯಂತೆ ಊರೆಲ್ಲಾ ಓಡುವುದು.

**ರಾಮಸಿಂಗ.**—ಇರಬಹುದು.

**ಪರ್ವತಸಿಂಗ.**—ವಾರ್ಧಕ್ಯದಲ್ಲಿ ಹಾಗಿರುವುದಿಲ್ಲ. ಚಳಿಗಾಲದ ಗಾಳಿಯಂತೆ ವಿಚಾರದಿಂದ ಸಾವಧಾನವಾಗಿ ಬೀಸುವುದು.

**ರಾಮಸಿಂಗ.**—ಇರಬಹುದು.

**ಪರ್ವತಸಿಂಗ.**—ನನಗಂತೂ ವಯಸ್ಸು ಜಾರಿಹೋಯಿತು. ಇನ್ನು ಳಿದುದು ಒಂದೋ ಎರಡೋ ಗಳಿಗೆಗಳು.

**ರಾಮಸಿಂಗ.**—ಕ್ಷತ್ರಧರ್ಮವು ಅಜರಾಮರವಾಗಿದೆ.

**ಪರ್ವತಸಿಂಗ.**—ನನ್ನ ಆಯುಷ್ಕಾಲಕ್ಕೆ ಸಂಜೆಯು ಬೇಗನೆ ಬರುವುದು. ರಾಜ್ಯವನ್ನು ಕಾವಲಿಡುವುದಕ್ಕೆ ರಾಮಸಿಂಗ, ವಿಕ್ರಮಸಿಂಗ,

ಶಾರ್ದೂಲಸಿಂಗ, ಪ್ರತಾಪಸಿಂಗ—ಎಂಬ ನಾಲ್ಕು ಸಿಂಹದ ಮರಿಗಳನ್ನು ವಜ್ರಪಂಜರದಲ್ಲಿಟ್ಟು ಸಾಕಿದ್ದೇನೆ.

**ಸರದಾರ.**—ಹರಹರ ಮಹಾದೇವ!

**ಪರ್ವತಸಿಂಗ.**—ನನ್ನ ಜೀವನವು ಶಿಲಾಪರ್ವತದಂತೆ ಕಳೆದು ಹೋಯಿತು. ಎಲ್ಲಿ ನೋಡಿದರೂ ಖಿಲಭೂಮಿ. ಯಾವ ಕಾರ್ಯವನ್ನೂ ಮಾಡಲಿಲ್ಲ. ಮುಪ್ಪಿನಲ್ಲಿ ಇದೊಂದು ವಿಪತ್ತು.

**ಸರದಾರರು.**—ನಮ್ಮ ಭುಜಗಳಿರುವಷ್ಟು ಕಾಲ ಅಂತಹ ವಿಪತ್ತಿಲ್ಲ.

**ಪರ್ವತಸಿಂಗ.**—ಸರದಾರರೇ! ಖಡ್ಗವನ್ನು ಮುಟ್ಟಿ ಪ್ರತಿಜ್ಞೆ ಮಾಡಿರಿ. ಒಬ್ಬ ರಜಪೂತನಾದರೂ ಇರುವ ವರೆಗೆ ಆ ಯವನರಾಜನ ಹೆಸರೂ ಈ ಕೋಟೆಯೊಳಗೆ ಕೇಳಬಾರದು.

[ಖಡ್ಗವನ್ನು ವಂದಿಸುವರು. ಹರಹರ ಮಹಾದೇವ ಎಂದು ಬೊಬ್ಬಿರಿವರು।

**ಪರ್ವತಸಿಂಗ.**—ತುರುಷ್ಕರಾಜನ ದೃಷ್ಟಿ ಲೀಲೆಯ ಕಡೆಗೆ ತಿರುಗಿದೆ ಯೆಂದು ಮೊದಲೇ ಹೇಳಿದ್ದೇನೆ. ಇನ್ನು ಮೂರು ತಿಂಗಳೊಳಗೆ ಅವನ ಸೈನ್ಯಸಾಗರವು 'ದೀನ್‌ದೀನ್' ಎಂಬ ಘೋಷದೊಂದಿಗೆ, ತರಂಗರೂಪ ವಾಗಿ ಈ ಕೋಟೆಯ ಗೋಡೆಗಳನ್ನು ಹೊಡೆಯಲೂ ಬಹುದು. ಆಗ ನೀವೇನು ಮಾಡುವಿರಿ?

**ಎಲ್ಲರೂ.**—ವೈರಿರಕ್ತವನ್ನು ಚೆಲ್ಲುವೆವು. ತಲೆಗಳನ್ನು ಚೆಂಡಾಡು ವೆವು. ಮಾರಿಗೆ ಬಾರಣೆ ಕೊಡುವೆವು. ಅಸಂಖ್ಯಾತ ಕಾಳಭೈರವರಂತೆ ಮೃತ್ಯುಭೂಮಿಯಲ್ಲಿ ಉಲ್ಲಾಸದಿಂದ ನರ್ತಿಸುವೆವು.

**ಪರ್ವತಸಿಂಗ.**—ಶಹನು ಬಲಿಷ್ಠನು. ಅವನ ಸೇನೆಗೆ ಮಿತಿಯಿಲ್ಲ.

**ಎಲ್ಲರೂ.**—ನಮ್ಮ ಪರಾಕ್ರಮಕ್ಕೂ ಮಿತಿಯಿಲ್ಲ.

**ಪರ್ವತಸಿಂಗ.**—ನಾವು ಅಲ್ಪಸಂಖ್ಯಾಕರು.

**ಎಲ್ಲರೂ.**—ಆದರೂ ಮಹಾಬಲರು.

**ಪರ್ವತಸಿಂಗ.**—ಹೌದು, ವೀರರೇ. ಅವನ ಸೈನ್ಯಸಾಗರವೇ ಪ್ರಲಯ ಭೀಕರತೆಯಿಂದ ಗರ್ಜಿಸಿದರೆ?

**ಎಲ್ಲರೂ.**—ನಮ್ಮ ಕೆನ್ನೆತ್ತರಿಂದದು ಕೆಂಪಾಗುವುದು.

**ಪರ್ವತಸಿಂಗ.**— ಹೆಂಗಸರ ಗತಿಯೇನು? ಮಕ್ಕಳ ಗತಿಯೇನು?

**ಎಲ್ಲರೂ.**— ಬೇರನ್ನು ಕಿತ್ತರೆ ಮರದ ಗತಿಯೇನು ? ಅದರಲ್ಲಿರುವ ಫಲದ ಗತಿಯೇನು ?

**ಪರ್ವತಸಿಂಗ.** - ಇದನ್ನೆಣಿಸಿದರೆ ರೋಮಾಂಚವಾಗುತ್ತದೆ.

**ಎಲ್ಲರೂ.**— ಧರ್ಮವೆಂಬ ಮಹಾಯಜ್ಞಕ್ಕೆ ಉತ್ತಮವಸ್ತುಗಳನ್ನೇ ಆಹುತಿಮಾಡಬೇಕು.

**ಪರ್ವತಸಿಂಗ.**— ರಣಮತ್ತವೀರರೇ! ಇನ್ನೊಮ್ಮೆ ಜಯಕಾರ ಮಾಡಿರಿ. ಆಹೋರಿನ ಕೋಟೆಯೊಳಗೆ ಭೀರುತ್ವದಿಂದಾಗಲಿ ಆಲಸ್ಯ ದಿಂದಾಗಲಿ ಯಾವನಾದರೊಬ್ಬ ರಜಪೂತ ಭಟನು ಕುಳಿತ್ತಿದ್ದರೆ, ಅವನ ದೇಹಕ್ಕೆ ರೋಮಾಂಚವಾಗಲಿ! ವಿದ್ಯುತ್ ಪ್ರವೇಶವಾಗಲಿ!!

[ಹರಹರ ಮಹಾದೇವ ಎಂಬ ಜಯಕಾರ. ಖಡ್ಗಗಳ ಝಣಝಣ.]

**ಪರ್ವತಸಿಂಗ.**— ರಜಪೂತರೇ! ನೀವೇ ಜಗದೇಕವೀರರು. ನೀವಿರು ವುದರಿಂದಲೇ ಪರ್ವತಸಿಂಗನ ನಾಮವು ಹತ್ತು ಜನರ ಬಾಯಲ್ಲಿ ನಲಿಯು ವಂತಾಗಿದೆ. ಅಹಮ್ಮದ್‍ಶಹನು ಊರನ್ನೆಲ್ಲಾ ಕೊಳ್ಳೆಹೊಡೆದು ರಜಪೂತ ಸ್ತ್ರೀರತ್ನಗಳಿಂದ ತನ್ನ ಕಾಲಹಾವುಗೆಯನ್ನು ಸಿಂಗರಿಸಿದ್ದರೂ, ಇಲ್ಲಿಗೆ ಅವನ ಬಾಧೆಯಿಲ್ಲದಂತಾಗಿದೆ.

**ಎಲ್ಲರೂ.**— ಹರಹರ ಮಹಾದೇವ!

**ಪರ್ವತಸಿಂಗ.**— ರಾಜತ್ವವೆಂದರೆ ಅದೊಂದು ವೇಷ. ನಾಲ್ವರು ರಾಜನೆಂದು ಕರೆದರೆ ರಾಜನಾಗುತ್ತಾನೆ. ಇಲ್ಲವಾದರೆ ಇಲ್ಲ.

**ಸರದಾರರು.**— ಮಹಾಪ್ರಭು! ರಾಜಾ ಪ್ರತ್ಯಕ್ಷ ದೇವತಾ!!

**ಪರ್ವತಸಿಂಗ.**— ಪುರಾತನರು ಹೇಗೆ ಬೇಕಾದರೂ ಹೇಳಿರ ಬಹುದು. ನಾಲ್ಕು ಸಂಸ್ಕೃತ ಶ್ಲೋಕಗಳನ್ನು ಉಚ್ಚರಿಸಿದ ಮಾತ್ರಕ್ಕೆ ರಾಜಪದವಿಗೆ ಮಕುಟವಿಟ್ಟಂತಾಗುವುದಿಲ್ಲ. ಪ್ರಜಾವರ್ಗವೆಂದರೆ ದೊಡ್ಡ ಸಮುದ್ರ. ಅದರ ಆಳದೊಳಗೆ ಘರ್ಷಣವಾಗಿ ಸಣ್ಣ ವಲಿಗಳು, ಅನಂತರ ಸಣ್ಣ ವೀಚಿಗಳು, ಅನಂತರ ಭೀಷಣ ತರಂಗಗಳು ಏಳುತ್ತವೆ. ಇಂತಹ ಕ್ಷೋಭೆಯಿಂದ ಉಂಟಾಗುವ ಗುಳ್ಳೆಯೆಂದರೆ ಒಬ್ಬ ರಾಜ. ಪ್ರಜೆಗಳೇ!

ವೀರರೇ! ಮಂತ್ರಿಗಳೇ! ನೀವಿಲ್ಲದಿದ್ದರೆ ಈ ರಾಜ್ಯವೆಲ್ಲಿ? ಸಿಂಹಾಸನವೆಲ್ಲಿ? ಮುಕುಟವೆಲ್ಲಿ? ಆದುದರಿಂದಲೇ ನೀವು ನನ್ನ ಪ್ರಾಣಸಮಾನರೆಂದು ನಾವು ಮೊದಲೇ ಹೇಳಿದೆವು.

**ಸರದಾರರು.**—ಸಾಧು ಮಹಾಪ್ರಭು! ನಮ್ಮ ತಂದೆಯೇ ನೀನು!!

**ಪರ್ವತಸಿಂಗ.**—ನಿಮ್ಮನ್ನು ಕಂಡು ಕೃತಾರ್ಥನಾಗಿದ್ದೇನೆ. ಆನಂದ ಬಾಷ್ಪದಿಂದ ಸ್ನಾನವಾಯಿತು. ಇನ್ನು ಕ್ಷತ್ರಿಯ ಪರಾಕ್ರಮದ ಮಹಾ ಯಜ್ಞಕ್ಕೆ ದೀಕ್ಷಿತನಾಗಿ ಕುಳಿತುಬಿಡುತ್ತೇನೆ. ಯಜ್ಞದ ಪೂರ್ಣಾಹುತಿ ಕೆಚ್ಚೆದೆಯ ರಜಪೂತರ ಕರುಳಿನಿಂದ ಆಗಬೇಕಾದೀತು. ರಕ್ತದಿಂದ ಆಜ್ಯಾ ಹುತಿಯಾಗಬೇಕಾದೀತು. ಆದರೇನು? ಯಜ್ಞಧೂಮದಿಂದ ಸ್ವರ್ಗ ಸೋಪಾನವು ಪವಿತ್ರವಾಗುವುದು. ರಜಪೂತರೆಲ್ಲರ ಜಡಶರೀರಕ್ಕೆ ಅಂದು ಪ್ರಲಯವಾದರೂ ಚಿಂತೆಯಿಲ್ಲ. ನಿಷ್ಕಲಂಕವಾದ ಕ್ಷತ್ರ ಧರ್ಮದ ನವೀನ ಸೃಷ್ಟಿಯಾಗಬೇಕಾದರೆ ಮೊದಲು ಪ್ರಲಯವು ಬರಲೇ ಬೇಕಲ್ಲವೇ? ಅಂತಹ ಸರ್ಗಕ್ಕೆ ಇಂದೇ ಮೊದಲು. ಆದುದರಿಂದ ನಮಗಿನ್ನು ಮುಂದೆ ಪುನರ್ಜನ್ಮ.

[ಮತ್ತೊಮ್ಮೆ ಜಯಧ್ವನಿ.]

**ಪರ್ವತಸಿಂಗ.**—ವಾರ್ತೆಯನ್ನು ಮುಗಿಸಿ ಬಿಡುತ್ತೇನೆ. ಇಂದಿ ನಿಂದ ಮೂರು ತಿಂಗಳೊಳಗೆ 'ಲೀಲೆ ನಿನ್ನ ಉದ್ಯಾನಲತೆಯಾಗುವಳು' ಎಂದು ಶಹನಿಗೆ ಹೇಳಿ ಕಳುಹಿಸಿದ್ದೇನೆ ಕೇವಲ ಕಾಲವಂಚನೆಗಾಗಿ. ಅಷ್ಟರಲ್ಲಿ ನಮ್ಮ ಕೋಟೆಯು ಪೂರ್ಣಸಿದ್ಧವಾಗಲಿ! ಗಡಿಗೋಪುರಗಳಲ್ಲಿ ವೀರ ಭಟರು ಕಾದಿರಲಿ! ಕೊತ್ತಳಗಳಲ್ಲಿ ರಜಪೂತವ್ಯಾಘ್ರಗಳು ಹಸಿದು ನಿಂತಿ ರಲಿ! ಆಹೋರು ಕೋಟೆಯೊಳಗುಳ್ಳ ಕ್ರಿಮಿಕೀಟಗಳೂ ಕವಚಬಂಧ ಮಾಡಿ ಯುದ್ಧಕ್ಕೆ ಸಿದ್ಧವಾಗಲಿ! ಕಣ್ಣೀರು, ನಿಟ್ಟುಸಿರು, ಗದ್ಗದಕಂಠ ಇವು ಗಳ ವಾರ್ತೆಯೇ ಇರಬಾರದು, ವೀರರೆ! ಇವು ಅಧೀರಹೃದಯದ ವರದಿಗಳು. ನಾರಿಯರ ಮುಖದಲ್ಲಿ ಅರಳಿದ ನಗೆಯು ಬಿಡಬಾರದು ಹುಬ್ಬಿನಲ್ಲಿ ಮಲಿನತೆ ಕಾಣಬಾರದು. ಬದುಕಲು ಸಿದ್ಧರಾದವರು ಸಾಯಲೂ ಸಿದ್ಧರಾಗಿರಬೇಕು. ವೀರರೇ! ಯಾರು ಸಾವಿಗೆ ಹೆದರುತ್ತಾರೋ ಅವರು ಬದುಕಿಗೂ ಹೆದರಬೇಕು. ಸಾವುಹುಟ್ಟುಗಳು ನಮ್ಮ ಕರ್ಮ ಪಥದ ತುದಿ ಮೊದಲುಗಳು. ಈ ಪಥದಲ್ಲಿ ಅಡಿಯಿಟ್ಟ ಮೇಲೆ ಹಿಂಜ

ಯಲು ಸಾಧ್ಯವಿಲ್ಲವೆಂದ ಮೇಲಾದರೂ ಮುಂಬರಿಯುವಾಗ ವ್ಯಸನ ವೇಕೆ?

**ಸರದಾರರು.**— ಸ್ವಲ್ಪವೂ ಇಲ್ಲ.

**ಪರ್ವತಸಿಂಗ.**— ಈ ಐದುಸಾವಿರ ಮಂದಿ ವೀರರಲ್ಲಿ ತುರುಷ್ಕರ ಅರ್ಧಚಂದ್ರಧ್ವಜವನ್ನು ಕಂಡೊಡನೆ ಹಿಂದೋಡುವ ಹೇಡಿ ಒಬ್ಬನಾದರೂ ಇರುವನೆಂದು ನಾನು ಭಾವಿಸಲಿಲ್ಲ. ಮೃತ್ಯುವಿನೊಡನೆ ಮಲ್ಲಯುದ್ಧ ಮಾಡುವುದೇ ರಜಪೂತರಿಗೆ ಮೆಚ್ಚು! ರಾಮಸಿಂಗ! ಈಗ ನನ್ನನ್ನು ತಂದೆ ಯೆಂದು ಹೇಳಲು ನಾಚುವೆಯಾ ?

**ರಾಮಸಿಂಗ.**— ಪಿತೃದೇವ! ಕ್ಷಮಿಸು (ಎಂದು ಉದ್ದಂಡ ನಮಸ್ಕರಿಸುವನು).

**ಪರ್ವತಸಿಂಗ.**— ಕುಮಾರ! ಇದೇನು ? ನೀನು ತಾಯೊಡನೆ ಆಡಿದ ಮಾತುಗಳನ್ನು ಕೇಳಿ, ನನ್ನ ಜನ್ಮವು ಸಫಲವಾಯಿತೆಂದು ಭಾವಿಸಿ ದೆನು. ಇಲ್ಲ; ಇನ್ನು ಸಾಯಲೇ ಬೇಕೆಂದು ತೋರುತ್ತದೆ. ಚಿಕ್ಕದಾದ ಸಸಿ ಯೊಂದು ಬೆಳೆಯುವ ಕಾಲಕ್ಕೆ ಸುತ್ತಲೂ ಬೇಲಿ ಹಾಕುತ್ತೇವೆ. ಆ ಬೇಲಿಯು ಸಸಿಯನ್ನು ಕೆಲಗಾಲ ಬಾಹ್ಯಶತ್ರುಗಳಿಂದ ಕಾಪಾಡುವುದು. ಅದರ ಬೆಳೆವಣಿಗೆಯು ಹೆಚ್ಚಿದಂತೆ, ಆ ಒಣ ಬೇಲಿಯು ತನ್ನ ತರಗೆಲೆಯುಳ್ಳ ಕವಲುಗಳಿಂದ ಅದರ ಬೆಳೆವಣಿಗೆಯನ್ನೇ ಕೆಡಿಸುತ್ತದೆ. ಅದರಂತೆ ನನ್ನ ಪಾಡಾಗಿದೆ, ರಾಮಸಿಂಗ !

**ರಾಮಸಿಂಗ.**— ಎಂದೂ ಇಲ್ಲ.

**ಪರ್ವತಸಿಂಗ.**— ಇಲ್ಲವೆಂದರೆ ಅರ್ಥವೇನು ? ಲೋಕಸ್ಥಿತಿಯೇ ಹಾಗೆ. ಒಂದೊಂದಕ್ಕೆ ಒಂದೊಂದು ಸಮಯ. ಆಗ ಅದು ಹೊಸದು, ಅದೇ ಸೊಬಗು. ಆ ವಸ್ತುವಿನ ಹೃದಯವನ್ನು ಭೇದಿಸಿ ಇನ್ನೊಂದು ಮೂಡುವಾಗ, ಹೊರಗಣ ವಸ್ತು ಹಳೆಯ ಅಂಗಿಯಂತೆ ವಿಸರ್ಜನೀಯವಾಗುತ್ತದೆ. ಮತ್ತೆ ಈ ಹಳೆತನದ ಹೊದಿಕೆಯಿರಬಾರದು.

**ರಾಮಸಿಂಗ.**— ತಂದೆ! ನನ್ನ ಅಪರಾಧವನ್ನು ಮನ್ನಿಸು.

**ಪರ್ವತಸಿಂಗ.**—ಮಗನೆ, ಮನ್ನಿಸುವುದು ಯಾವುದನ್ನು? ಕ್ಷಮಿಸುವುದು ಯಾವ ಅಪರಾಧವನ್ನು? ನೋಡು, ಮಗನೆ, ಕಣ್ಣೀರು ಸುರಿಯುತ್ತದೆ.

**ರಾಮಸಿಂಗ.**—ಹಾ! ನನಗೆ ಯಾವ ನರಕವು ಸಿದ್ಧವಾಗಿದೆ?

**ಪರ್ವತಸಿಂಗ.**—ರಾಮಸಿಂಗ! ಬಾ! ನನ್ನನ್ನು ಗಾಢವಾಗಿ ಆಲಿಂಗಿಸು. ನೀನು ಅಭಿಮಾನಿ; ಕಡುಗಲಿ. ತಂಗಿಯು ಕುಲಚ್ಯುತಿಯಾಗುವುದೆಂದು ಕೇಳುವುದೂ ಅಪಮಾನವಲ್ಲವೇ? ಹೌದು; ನಿನ್ನ ಪೌರುಷಕ್ಕೆ ಕೊಡಲಿಯಿಂದ ಹೊಡೆದಂತಾಯಿತು. ತೋರ ಕಿಡಿಗಳು ಹೊರಚೆಲ್ಲಿದುವು. ರಾಮಸಿಂಗ, ನೀನೇ ಧನ್ಯನು. ಅಥವಾ ನಾನೇ ಧನ್ಯನು. ನಿನ್ನನ್ನು ಪುತ್ರನೆಂದು ಕರೆವ ಪುಣ್ಯವಿದೆ ನನಗೆ [ಎಂದು ಬಿಗಿಯುಪ್ಪುವನು].

**ರಾಮಸಿಂಗ.**—ಇಂತಹ ದುರಾಲೋಚನೆ ನನಗೆ ಬರಬಾರದಿತ್ತು, ಪ್ರಭು! [ಕಣ್ಣೀರು ಸುರಿಸುವನು].

**ಪರ್ವತಸಿಂಗ.**—ಮಗು! ವ್ಯಸನವೇಕೆ? ಇದು ಇಂದು ಕಲಿತ ಸ್ವಭಾವವಲ್ಲ; ಒಡಹುಟ್ಟಿದ ಸ್ವಭಾವ. ಅಲ್ಲ; ಯೌವನದಲ್ಲಿ ಇರಬೇಕಾದ ಗುಣ. (ವಿಕ್ರಮನ ಕಡೆಗೆ ನೋಡಿ) ವಿಕ್ರಮ! ಏಕೆ ಮೌನದಲ್ಲಿರುವೆ?

**ವಿಕ್ರಮ.**—ಮಾತಾಡುವುದಕ್ಕೆ ಲೋಕದಲ್ಲಿ ಎಷ್ಟೋ ಜನರಿರುವರು.

**ಪರ್ವತಸಿಂಗ.**—ಇಂತಹ ವಿಷಮಸಂಕಟವು ನಮ್ಮ ರಾಜ್ಯಕ್ಕೆ ಬಂದಿರುವಾಗ, ಪ್ರತಿಯೊಂದು ಬಾಯಿಂದಲೂ ಅಭಿಪ್ರಾಯ ಹೊರಡಬೇಕು.

**ವಿಕ್ರಮ.**—ಈ ಖಡ್ಗವಿದೆ; ಈ ಕೈಯಿದೆ; ಇವುಗಳೇ ಅಭಿಪ್ರಾಯವನ್ನು ಹೇಳಲಿ.

**ಪರ್ವತಸಿಂಗ** (ಆತನನ್ನು ಬಿಗಿಯುಪ್ಪಿ).—ಲೀಲೆಯ ಜನ್ಮದಿನವನ್ನು ಹೀಗೆ ವೀರೋಚಿತರೀತಿಯಲ್ಲಿ ಆಚರಿಸುವ ಸಂದರ್ಭವು ಬರಬಹುದೆಂದು ಭಾವಿಸಿರಲಿಲ್ಲ, ವಿಕ್ರಮ. ಮನುಷ್ಯರನ್ನು ಹುಡುಕಿಕೊಂಡೇ ಸಂದರ್ಭವು ಬರುವುದು. ಅದು ನಿರೀಕ್ಷಣೆಯ ಪರಿಧಿಯೊಳಗೆ ಅಡಗುವುದಿಲ್ಲ. ಇರಲಿ. ನಮ್ಮ ಲೀಲೆ ಹುಟ್ಟಿದಂದಿನಿಂದ ರಾಜ್ಯಸುಖಾಭಿವೃದ್ಧಿಯಾಯಿತು; ಒಂದು

ತೆರೆಯಿರಲಿಲ್ಲ, ಒಂದು ಬಿರುಗಾಳಿಯಿರಲಿಲ್ಲ. ಆದುದರಿಂದ ಸಂಸಾರ ಸಾಗರವು ಪ್ರಕುಪಿತವಾಗದೆ, ಗರ್ಜಿಸದೆ, ನಮ್ಮ ನೌಕಾಯಾತ್ರೆಯನ್ನು ಸುಖಮಯವನ್ನಾಗಿ ಮಾಡಿತು. ಈಗ ಸುಟ್ಟುರೆಯ ಲಕ್ಷಣಗಳು ಕಾಣು ತ್ತಿವೆ, ಅತ್ತ ಆಕಾಶದಲ್ಲಿ ಕಾರ್ಮೋಡಗಳು ಹುಬ್ಬುಗಂಟಿಕ್ಕಿ ನೋಡುತ್ತಿವೆ. ಈಗ ನಿನ್ನ ಕರ್ತವ್ಯವೇನೆಂದು ತಿಳಿದಿದೆಯೆ, ವಿಕ್ರಮ ?

**ವಿಕ್ರಮ.** — ಅಪ್ಪಣೆಯಾಗಲಿ, ಮಹಾಪ್ರಭು!

**ಪರ್ವತಸಿಂಗ.** — ರಾಮಸಿಂಗನು ಔರಸಪುತ್ರನು. ಆದರೂ ನೀನು ವಾತ್ಸಲ್ಯದಿಂದಾಗಿ ಪುತ್ರನಿರ್ವಿಶೇಷನಾಗಿರುವೆ. ನನಗೆ ಒಬ್ಬನೇ ಒಬ್ಬ ಮಗನೆಂಬ ಭಾವನೆ ಇದುವರೆಗೆ ಬರಲಿಲ್ಲ. ಇನ್ನೂ ಬರುವಂತಿಲ್ಲ. ನಮ್ಮ ಲೀಲೆ ನಿನ್ನ ಆಶ್ರಯದಲ್ಲಿಯೇ ಬಳೆಯಬೇಕೆಂಬ ಆಸೆಯಿತ್ತು. ಸ್ತ್ರೀಧರ್ಮ ವೆಂದರೆ ಅತಿಕೋಮಲವಾದುದು; ಸಹಿಷ್ಣುವಾದುದು. ಬಳ್ಳಿಯು ಮುಳ್ಳು ಗಿಡವನ್ನು ಆಶ್ರಯಿಸುತ್ತದೆ; ಬೇಡವೆನ್ನುವುದಿಲ್ಲ. ಇಮ್ಮಾವಿನ ಅಡಿ ಯಲ್ಲಿಯೂ ಸಜ್ಜನೆ ಬೆಳೆಯುತ್ತದೆ. ಆದರೆ ಚತುರನಾದ ತೋಟಗಾರನು ಎಳಲತೆಯನ್ನು ಮುಳ್ಳುಕಂಟಿಗೆ ಹಬ್ಬಿಸನು. ನಮ್ಮ ವಂಶವೆಂಬ ನಿರ್ಮಲ ದರ್ಪಣವನ್ನು ವಿಕ್ರಮನೆಂಬ ಅನರ್ಘರತ್ನದಿಂದ ಅಲಂಕರಿಸಬೇಕೆಂದಿದ್ದೆ. ಆದರೆ ಸಮಯ ಬರಲಿಲ್ಲ. ಬರುವುದೇನೋ ತಿಳಿಯೆನು.

**ವಿಕ್ರಮ** (ಗದ್ಗದಕಂಠನಾಗಿ). — ಮಹಾರಾಜರ ಅನುಗ್ರಹವಿದ್ದರೆ ಸಾಕು.

**ಪರ್ವತಸಿಂಗ.** — ಲೀಲೆಯನ್ನು ಒಮ್ಮೆ ಕಾಪಾಡಿದವನೂ ನೀನೇ, ಇನ್ನೊಮ್ಮೆ ಕಾಪಾಡಬೇಕಾದವನೂ ನೀನೇ! ಅವಳ ಸತೀತ್ವವು ನಿನಗೆ ವಿಾಸಲು! ಯುದ್ಧವು ಮುಗಿಯಲಿ. ಹೇಗೆ ಬೇಕಾದರೂ ಅವಸಾನ ಹೊಂದಲಿ! ಜಯ ದೊರೆತರೆ ವಿಜಯೋತ್ಸವದ ಒಸಗೆಯನ್ನು ನಿಮ್ಮ ವಿವಾಹ ಮಂಗಲವಾದ್ಯವು ಕಳೆಯೇರಿಸುವುದು. ಅಪಜಯವಾದರೆ . . . (ಗದ್ಗದ ಕಂಠದಿಂದ) . . . ಇಲ್ಲ; ಸತೀತ್ವಕ್ಕೆ ಅಪಜಯವೆಲ್ಲಿಂದ ? ಇಹಲೋಕದಲ್ಲಿ ಅಲ್ಲದಿದ್ದರೂ, ಈ ಲೀಲೆ, ಈ ನನ್ನ ಜೀವದ ಮುದ್ರೆ, ನಿನ್ನವಳಾಗುವಳು.

**ವಿಕ್ರಮ.** — ಹರಸಿ ಬೀಳ್ಕೊಡು, ಮಹಾರಾಜ!

**ಪರ್ವತಸಿಂಗ.**—ಇದು ಲೀಲೆಯೊಡನೆ ಹುಟ್ಟಿದ ಕಣ್ಣೀರು, ಅವಳನ್ನು ಕಾದಿದ್ದ ಕಣ್ಣೀರು, ಪುತ್ರೀವಾತ್ಸಲ್ಯದ ಕಣ್ಣೀರು. ಅದರ ಸೇಚನೆಯಿಂದ ನಿನಗೆ ಪಟ್ಟ ಕಟ್ಟುತ್ತೇನೆ, ವಿಕ್ರಮ! ವಿಕ್ರಮಿಯಾಗಿ ಬಾಳು! ವೀರತೆಗೆ ಅರಸಾಗಿ ಬಾಳು! ಲೀಲೆಗೆ ಅರಸಾಗಿ ಬಾಳು! ಒಂದುವೇಳೆ ವೀರಧರ್ಮವು ಮಸಣದ ಹಾದಿಯನ್ನು ಹಿಡಿಸಿದರೂ ಚಿಂತೆಯಿಲ್ಲ; ವೀರನಾಗಿ ಬಾಳು! ಶೂರನಾಗಿ ಬಾಳು!! ಯುದ್ಧಭೂಮಿಯಲ್ಲಿ ವರ್ಮಸಹಿತನಾಗಿ ಮಡಿದು ಬಿದ್ದರೂ ಚಿಂತೆಯಿಲ್ಲ. ರಜಪೂತರ ಉಜ್ವಲ ಸಮರ್ಪಣಶಕ್ತಿಗೆ ಅಂದು ಬೀಜಾರೋಪವಾಗುವುದು. (ವಿಕ್ರಮನನ್ನು ಆಲಿಂಗಿಸುವನು).

**ವಿಕ್ರಮ.**—ಇದೆಲ್ಲಿಯ ಅಮೃತವರ್ಷ! ಧನ್ಯನಾದೆನು.

**ಪರ್ವತಸಿಂಗ.**—ರಾಮಸಿಂಗ! ನೀನು ಮತ್ತು ಪ್ರತಾಪ ಮತ್ತು ಶಾರ್ದೂಲ, ಇಷ್ಟು ಮಂದಿ ಇಂದಿನಿಂದ ರಾಜ್ಯವ್ಯವಸ್ಥೆಯನ್ನು ನೋಡಿಕೊಳ್ಳಿರಿ. ನಿಮಗೆ ಆಹೋರಿನ ರಾಜ್ಯಭಾರವನ್ನೊಪ್ಪಿಸಿದ್ದೇನೆ. ಇನ್ನು ಮೂರೇ ತಿಂಗಳ ಅವಧಿ... ಅಷ್ಟರಲ್ಲಿ ತೊಟ್ಟಿಲಲ್ಲಿ ತೂಗಾಡುವ ರಜಪೂತ ಶಿಶುವಾದರೂ ಖಡ್ಗಧಾರಣ ಮಾಡಬೇಕು. ತಿಳಿಯಿತೇ?

**ನಾಲ್ವರೂ.**—ತಥಾಸ್ತು! (ಪರ್ವತಸಿಂಗನ ಪಾದಕ್ಕೆ ಬೀಳುವರು. ಅವನು ಅವರನ್ನು ಬೇರೆಬೇರೆಯಾಗಿ ಆಲಿಂಗಿಸುವನು).



# ಮೂರನೆಯ ಅಂಕ

## ದೃಶ್ಯ ೧

[ಶಹನ ಅರಮನೆಯ ಪ್ರಾಂಗಣ. ಮಧುಸೂದನಮಿಶ್ರ.]

**ಮಧುಸೂದನ.**—ಎಂತಹ ಭಾಗ್ಯಹೀನನು ನಾನು! ನಿದ್ದೆ ಸಂಪೂರ್ಣವಾಗಿ ಮುಗಿದಿರಲಿಲ್ಲ. ರೆಪ್ಪೆಯ ಬಾಗಿಲನ್ನು ಬಲಿದು ಯಾರಿಗೂ ತಿಳಿಯದಂತೆ, ಪ್ರಿಯವಸ್ತುಗಳನ್ನೆಲ್ಲಾ ವಂಚಿಸಿ, ಎಲ್ಲಿಯೋ ಸ್ವರ್ಗೀಯ ಸುಖಸ್ವಪ್ನದಲ್ಲಿ ತೇಲಾಡುತ್ತಿದ್ದೆ. ರಂಭೆಯೇ ಮೊದಲಾದ ಅಪ್ಸರ ಸ್ತ್ರೀಯರು ಪಾದಸೇವೆಮಾಡುತ್ತಿದ್ದರು. ಪ್ರೇಮಮುದ್ರೆಯನ್ನೊತ್ತಿರೆಂದು ತುಟಿಗಳನ್ನು ಮುಂದೆಮಾಡಿ, ನನ್ನ ಮೊಗವನ್ನೇ ನಗೆಗಣ್ಣಿನಿಂದ ನೋಡುತ್ತಿದ್ದರು. ಕೇಳಿದೊಡನೆ ದೊರೆವ ವಸ್ತುವಿಗೆ ಬೆಲೆಯುಂಟೇ ? ನಾನು ಕೊಡಲಿಲ್ಲ. ಅಂಗಲಾಚಿ ಬೇಡಿದರು; ಆಗ ದಾನಮಾಡುತ್ತಿದ್ದೆ. ಅಷ್ಟರಲ್ಲಿ ಬಂತು ವಿಘ್ನ! ಎಂತಹ ಪಾಪಿ ನಾನು! ಲೋಕದಲ್ಲಿ ಇಂತಹ ಕಾಯಿಕಸುಖವನ್ನನುಭವಿಸುವ ಪುಣ್ಯವಂತರೂ ಇಲ್ಲ. ಸ್ವಾಪ್ನಿಕಸುಖವನ್ನನುಭವಿಸಲೂ ಬಿಡಬಾರದೇ ಆ ಪರಮಾತ್ಮನಿಗೆ ? ಎಂತಹ ಪಕ್ಷಪಾತವಯ್ಯ? ಒಮ್ಮೊಮ್ಮೆ ಸಿಟ್ಟು ಬಂದರೆ ಈ ಯಜ್ಞೋಪವೀತವನ್ನು ಹರಿದು ಬಿಸುಡಬೇಕೆಂದು ಕಾಣುತ್ತದೆ. ಹುಂ. ಸ್ವಪ್ನದ ವಿಚಾರ ಹಾಗಾಯಿತು. ಆ ರಾಜ್ಯದಿಂದ ಈ ರಾಜ್ಯಕ್ಕೆ ಬಂದರೆ ಶಹನೇ ನನಗೆ ದೇವರಲ್ಲವೇ ? ಅವನ ಅಪ್ಪಣೆಯನ್ನು ಶಿರಸಾ ವಹಿಸದೆ ನಿರ್ವಾಹವಿಲ್ಲ. ಆದರೆ ಶಹನು ಇಷ್ಟೊಂದು ಸುಖವನ್ನು ನನಗೆ ಕಲ್ಪಿಸಿ ಕೊಡಬಾರದೇ ? ಆತನಿಗಾದರೋ, ಲೆಕ್ಕವಿಲ್ಲದಷ್ಟು ಅಂತಃಪುರಗಳಿವೆ. ಪ್ರತಿಯೊಂದರಲ್ಲಿಯೂ ಕದಳಿಯ ಕಂದುಗಳಂತಿರುವ ಮದಿರಾಕ್ಷಿಯರ ಮೇಳವಿದೆ. ಇಷ್ಟಾದರೂ ಸುಖ ಸಾಲದೋ ಸಾಲದು! ಅವನಿಗೆ ಯಾವಾಗಲೂ ಸುಖದ ಸಾಲ. ನನ್ನ ಪಾಡೋ, ಅದನ್ನು ನೋಡುವವರಾದರೂ ಯಾರು ? ಪರಿಶುದ್ಧ ಬ್ರಹ್ಮವಂಶದಲ್ಲಿ ಹುಟ್ಟಿದ್ದೇನೆ. ವಿಶ್ವಾಮಿತ್ರನ ತಪಃಶ್ಶೋಷಿತ ಪವಿತ್ರ ರಕ್ತವು ನಾಡಿಗಳಲ್ಲಿ ಹರಿಯುತ್ತದೆ. ಸಂಸ್ಕೃತ ಭಾಷೆಯನ್ನು ನೀರು ಕುಡಿದಂತೆ ಆಡಬಲ್ಲೆ. ಆದರೂ ಒಬ್ಬಳೇ ಒಬ್ಬಳು ನಾರೀಮಣಿಯು ಅನುರಕ್ತಾಪಾಂಗದಿಂದ ನನ್ನನ್ನು ನೋಡುವುದಿಲ್ಲ.

ನನ್ನ ಕುಲೀನತೆಗೆ ಕಾಸು ಬೆಲೆ ಕೊಡುವವರಿಲ್ಲ. ವಿದ್ವತ್ತೆಯು ಪಿಂಡವು ಕಬ್ಬಿಣದ ಖಂಡದಂತೆ ಕಾಣುತ್ತದೆ ಇಲ್ಲಿಯ ಮೊದ್ದು ಜಂತುಗಳಿಗೆ. ಬ್ರಾಹ್ಮಣನಾಗಿ ಹುಟ್ಟಬಾರದಯ್ಯ ಈ ಕಾಲದಲ್ಲಿ! ಹುಟ್ಟಬೇಕು ಅಲ್ಪ ಪ್ರಾಣವನ್ನು ಮಹಾಪ್ರಾಣವಾಗಿಯೂ, ಮಹಾಪ್ರಾಣವನ್ನು ಅಲ್ಪಪ್ರಾಣ ವಾಗಿಯೂ ಮಾಡುವ ಜಾತಿಗಳಲ್ಲಿ! ಬ್ರಾಹ್ಮಣ್ಯಕ್ಕೆ ಧಿಕ್ಕಾರವಿರಲಿ! ಇಷ್ಟು ಧಿಕ್ಕಾರವಿದೆಯೆಂದು ಅನ್ನವಿಲ್ಲದೆ ಹೊಟ್ಟೆಯೇನೂ ಕೇಳುವ ಹಾಗಿಲ್ಲ. ಹೊಟ್ಟೆಯಲ್ಲಿ ಉದರಾಗ್ನಿಯು ಕಿಡಿಗೆದರುವಾಗ ವೇದಾಂತಬುದ್ಧಿಯು ಸುಟ್ಟು ಭಸ್ಮವಾಗುತ್ತದೆ. ಬ್ರಾಹ್ಮಣನಾಗಿ ಹುಟ್ಟಿ, ಲೋಕನಿಂದೆಗೆ ಪಾತ್ರ ನಾಗಿ, ಜಾತಿಭ್ರಷ್ಟನಾದರೂ ಹಸಿವೆಯಾಗುತ್ತದೆ ಹೊಟ್ಟೆಯೊಳಗೆ! ಇದರ ಶಾಂತಿಕ್ರಿಯೆಗಾಗಿ ಅಲೆದಾಡುತ್ತಿದ್ದೇನೆ. (ಅತ್ತಿತ್ತ ನೋಡಿ) ಅಲೆದಾಡು ತ್ತಿದ್ದೇನೆ ಎಂಬುದನ್ನು ಬಾಯಿಯಿಂದ ಹೇಳದಿದ್ದರೂ ಜನರಿಗೆ ತಾನಾಗಿ ಗೊತ್ತಾಗುತ್ತದೆ. ಹುಂ. ಎಲ್ಲಿದ್ದಾಳೆ ನನ್ನನ್ನು ಕರೆತಂದ ದಾಸಿ? ಎಲ್ಲಿಯೂ ಕಾಣೆ!... ಓಹೋ! ಇದಾರು? ಬೀಬೀ.. ನನ್ನ ರಂಭೆ, ನನ್ನ ಊರ್ವಶಿ, ನನ್ನ ಮಂಜುಘೋಷೆ! ಇತ್ತ ಬಾ. (ಬೀಬಿ ಸಮೀಪಕ್ಕೆ ಬರುವಳು).

**ಬೀಬಿ.**—ಏನು ಬೆಳಗಾಗುವುದರೊಳಗೆ ಈ ದಿನ ಈ ವಿಕಟ ಚೇಷ್ಟೆ!

**ಮಿಶ್ರ.**—ನನ್ನದು ಚೇಷ್ಟೆ! ಅದರಲ್ಲಿಯೂ ವಿಕಟ ಚೇಷ್ಟೆ!

**ಬೀಬಿ.**—ಮತ್ತೇನು ಕಪಿ ಚೇಷ್ಟೆ!

**ಮಿಶ್ರ.**—ಹಾಗೆಲ್ಲಾ ಹೇಳಬಾರದು ಬೀಬೀ!

**ಬೀಬಿ.**—ಕಾಫರ್! ಸಾಕು ನಿನ್ನ ತಮಾಷೆ! (ಎಂದು ದೂರ ಸರಿವಳು).

**ಮಿಶ್ರ.**—ಓಹೋ, ಇದೇನು ಹೊಸ ಒಯ್ಯಾರ?

**ಬೀಬಿ.**—ಗೊಡ್ಡು ಬ್ರಾಹ್ಮಣ. ದೂರ ಹೋಗು.

**ಮಿಶ್ರ.**—ಬೀಬೀ! ಹೀಗೂ ಸಿಟ್ಟು. ಸಿಟ್ಟು ಬಂದರೆ ಮುಖದ ಸೌಂದರ್ಯವು ಮತ್ತಷ್ಟು ಉಜ್ವಲವಾಗಿ ಕಾಣುತ್ತದೆ. ಇನ್ನಷ್ಟು ಸಿಟ್ಟು ಬರಲಿ! (ಎಂದು ಸಮೀಪಕ್ಕೆ ಹೋಗಿ ಕೈಹಿಡಿವನು. ಅವಳು ಕೈಬಿಡಿಸಿ ದೂರ ನಿಲ್ಲುವಳು).

**ಮಿಶ್ರ.**—ಹೆಣ್ಣುಜನ್ಮದ ಮಾಟವೇ ಹೀಗೆ.

**ಬೀಬಿ.**—ಗಂಡಸರ ಪಾಡೊ!

**ಮಿಶ್ರ.**—ಗಂಡಸರು ಎಂದು ಸರಸಹಾಸವನ್ನು ಬೀರಿ ಮುಂದೆ ಬರುವರೋ ಅಂದೇ ಹೆಂಗುಸರ ಆಳಿಕೆ.

**ಬೀಬಿ.**—ನಿನ್ನ ಹಾಸ—ಅದರ ಶೋಭೆಯನ್ನು ವರ್ಣಿಸಬೇಕೇ?

**ಮಿಶ್ರ.**—ಗಂಡಸರು ತಾನಾಗಿ ಸಮೀಪಕ್ಕೆ ಬರುವಾಗ ಎಲ್ಲಿಯೂ ಇಲ್ಲದ ಮೋಡಿ. ದೂರ ಸರಿದರೆ ಕಣ್ಣೀರು. ಇದೀಗ ಹೆಣ್ಣಾಗಿ ಹುಟ್ಟಿದ ವಳಿಗೆ ಆ ಬ್ರಹ್ಮನು ಕಲಿಸಿಕೊಟ್ಟ ಒಂದೇ ಒಂದು ಮಹಾ ವಿದ್ಯೆ!

**ಬೀಬಿ.**—ಹೆಂಗುಸರ ಕಪಟ, ನಿಮಿಷ ಮಾತ್ರ. ಗಂಡುಸರದೋ, ಹುಟ್ಟಿದಂದಿನಿಂದ ಸಾಯುವ ವರೆಗೂ!

**ಮಿಶ್ರ.**—ಈ ಎರಡು ವಿಧಾನದ ಭಾವಪ್ರದರ್ಶನದಿಂದಲೂ ಹೆಂಗುಸರು ಗೆಲ್ಲುವರು. ಎಷ್ಟೇ ನಿಷ್ಠುರ ಹೃದಯನಾಗಿರಲಿ; ಪುರುಷನಾದವನಲ್ಲಿ ರಸಿಕತೆಯು ಒಸರು ಇದ್ದೇ ಇರುವುದರಿಂದ ಒಂದು ಸಮಯದಲ್ಲಿ ಆ ಸ್ತ್ರೀವ್ಯಕ್ತಿಯ ಕವಡು, ಆ ಠಕ್ಕು, ಅದೇ ಆಕೆಯ ನಿತಾಂತ ಸುಂದರತೆಯ ರೇಖೆಯಾಗಿ ಕಂಡುಬರುತ್ತದೆ. ಗಂಡಿಗೆ ಸಿಟ್ಟು ಬಂದಿತೆಂದೇ ಭಾವಿಸೋಣ. ಉಂಟಷ್ಟೆ ಕಣ್ಣೀರು, ಮಳೆಗಾಲದ ಮೋಡಗಳೊಡನೆ ಹುಟ್ಟಿದ ಕಣ್ಣೀರು, ಕರೆದಾಗ ಬರುವ ಕಣ್ಣೀರು, ಒರಸಿದಷ್ಟು ಒರತೆಯಿಡುವ ಕಣ್ಣೀರು! ಆ ಕಣ್ಣೀರು ಒಮ್ಮೆಗೆ ಸ್ತ್ರೀಹೃದಯದ ಕಲ್ಮಷವನ್ನು ತೊಳೆದಂತೆ ಕಾಣುತ್ತದೆ. ಆಗಲೂ ಸೋಲುವವನು ಈ ಮೂಢ ಮನುಷ್ಯ. ಆಗಲಿ ಬೀಬಿ, ನಿನಗೆ ಮಹತ್ವವು ಏತರಿಂದ? ಹೆಣ್ಣಾಗಿ ಹುಟ್ಟಿದೆಯೆಂಬುದರಿಂದ! ಅದರಲ್ಲಿಯೂ ಇತರ ಸ್ತ್ರೀಯರ ಕೆನ್ನೆ ಕೆಂಪೇರಿಲ್ಲ; ಮುಖ ದುಂಡಗಾಗಿಲ್ಲ; ಬಣ್ಣ ಸ್ವರ್ಣದಂತಿಲ್ಲ; ಈ ಒಂದೇ ಕಾರಣದಿಂದಲ್ಲವೇ? ನಿನ್ನ ಮುಖವನ್ನೂ ಬಣ್ಣವನ್ನೂ ಇಟ್ಟುಕೊ! ನಾನು ಮಾತ್ರ ಬೇರೆ ದಾರಿ ಹಿಡಿಯುತ್ತೇನೆ... (ಎಂದು ಸಿಟ್ಟಿನಿಂದ ಮುಖ ತಿರುಗಿಸುವನು).

**ಬೀಬಿ.**—ಕಾಫರರು ತಮಾಷೆಗಾರರೆಂದು ಬಲ್ಲೆ

**ಮಿಶ್ರ** (ಆತ್ಮಗತ).—**ಉಪಾಯ ಸಫಲವಾಯಿತು; ಅವಳು ಸೋಲುವ ಲಕ್ಷಣವಿದು.** (ಎಂದು ಮೌನವಾಗಿರುವನು).

**ಬೀಬಿ.**—ಬ್ರಾಹ್ಮಣ, ಬಂದ ಕೆಲಸವೇನು?

**ಮಿಶ್ರ.**—ಈಗ ಬಂತು ಬ್ರಾಹ್ಮಣನ ನೆನಪು!

**ಬೀಬಿ.**—ಮೊದಲು ಇದಕ್ಕಿಂತಲೂ ಅಧಿಕವಾದ ಪ್ರಣಯ, ಕೋಪಾಲಾಪಗಳಿದ್ದುವು . . .

**ಮಿಶ್ರ.**—ಅದು ಮೊದಲು.

**ಬೀಬಿ.**—ಈಗಲೂ ಇದ್ದೀತೆಂದು ಭಾವಿಸಿದೆ.

**ಮಿಶ್ರ.**—ಮೊದಲಿನ ಸ್ಥಿತಿಗೂ ಈಗಿನ ಸ್ಥಿತಿಗೂ ವ್ಯತ್ಯಾಸವಿರಲೇ ಬಾರದೆ ?

**ಬೀಬಿ.**—ಇರಬಾರದೆಂದು ಯಾರು ಹೇಳಿದರು ? ಇದೆಯೆಂದು ಭಾವಿಸಿರಲಿಲ್ಲ; ಅಷ್ಟೆ.

**ಮಿಶ್ರ.**—ಹುಂ. ಹಾಗಾದರೆ ಕೇಳು. ಈಗ ನಾನು ಬರಿಯ ಗೊಡ್ಡು ಬ್ರಾಹ್ಮಣನಲ್ಲ. ತಿಳಿಯಿತೇ!

**ಬೀಬಿ.**—ಹುಂ; ತಿಳಿಯಿತು

**ಮಿಶ್ರ.**—ಬಳಿಯಲ್ಲೇ ನಾನಿರದಿದ್ದರೆ ಶಹನಿಗೆ ನಿದ್ದೆಯೇ ಬರುವುದಿಲ್ಲ; ತಿಳಿಯಿತೇ!

**ಬೀಬಿ.**—ತಿಳಿಯದಿರುವುದೇ ?

**ಮಿಶ್ರ.**—ಹಾಗೆಂದರೆ, ನಾನು ಶಹನ ಮುಖ್ಯ ಮಂತ್ರಿ; ಸಂಸ್ಕೃತ ದಲ್ಲಿ ಹೇಳುತ್ತಾರೆ ಸರ್ವಸಚಿವನೆಂದು.

**ಬೀಬಿ.**—ಸಂಸ್ಕೃತ ತಿಳಿಯದವರು ಏನೆನ್ನುತ್ತಾರೆ ?

**ಮಿಶ್ರ**—ಅವರು ಏನು ಬೇಕಾದರೂ ನುಡಿಯಲಿ.

**ಬೀಬಿ.**—ಏನು ಬೇಕಾದರೂ ಹೇಳಿಕೊಳ್ಳಲಿ; ಅಡ್ಡಿಯಿಲ್ಲ. ನಮ್ಮ ಪ್ರೀತಿಯು ಮಾತ್ರ ಮೊದಲಿನಂತೆಯೇ ಇರಬೇಕು.

**ಮಿಶ್ರ.**—ನಾನು ಹೇಳಿದುದನ್ನು ಮೊದಲು ನೆನಪಿನಲ್ಲಿಟ್ಟುಕೊ. ಮೊದಲಿನ ಒನಪು ಒಯ್ಯಾರಗಳು ಮೊದಲಿನ ಮಧುಸೂದನನಿಗೆ ಮೆಚ್ಚಿ ದುವು. ಈಗ ಮೆಚ್ಚವು; ತಿಳಿಯಿತೇ ?

**ಬೀಬಿ.**—ಆಗಲೇ ತಿಳಿದಿದೆ! ಮಂತ್ರಿ ಶ್ರೇಷ್ಠ! ಬಂದ ಕಾರ್ಯ ವೇನು ? ಹೇಳಿ.

**ಮಿಶ್ರ.**—ಭೇಷ್‌ಬೀಬಿ! ಗೊತ್ತಿದೆ ನಿನಗೆ ದೇಶಕಾಲಪಾತ್ರಗಳಲ್ಲಿ ಸರಿಯಾಗಿ ವರ್ತಿಸುವ ಕ್ರಮ. ಆಗಲಿ; ಇಂದಿನ ಮಟ್ಟಿಗೆ ಬಹುವಚನ ಬೇಡ.! ಏಕವಚನದಲ್ಲಿ ಸಂಬೋಧಿಸಿದರೆ ಸಾಕು. (ಎಂದು ಆಕೆಯ ಕೈಹಿಡಿವನು).

**ಬೀಬಿ.**—ಕಾರ್ಯವನ್ನು ಕೇಳಿದರೆ ಹರಟೆಯಲ್ಲೇ ಕಾಲಹರಣ ಮಾಡುತ್ತೀರಿ.

**ಮಿಶ್ರ.**—ಯಾಕೆ ಬಂದೆ ಎಂದು ಕೇಳಬಾರದು, ಬೀಬಿ. ದಿನ ಕ್ಕೊಮ್ಮೆಯಾದರೂ ನಿನ್ನನ್ನು ನೋಡಬೇಡವೇ? ಇಲ್ಲಿ ವರೆಗೆ ಬಂದೆ. ಪ್ರಾಂಗಣದಲ್ಲಿ ನಿಂತೆ. ಅತ್ತಿತ್ತ ನೋಡಿದೆ. ಯಾರೂ ಕಂಡುಬರಲಿಲ್ಲ. ಬೀಬಿಯೊಬ್ಬಳ ಮುಖವು ಕತ್ತಲೆಯ ನಡುವಿನಿಂದ ಮೂಡಿಬಂತು. ಬೇಡವೆಂದರೂ . . . ಇದೇ ವೃತ್ತಾಂತ.

**ಬೀಬಿ** (ಮುಖವನ್ನು ತಿರುಗಿಸುತ್ತಾ).—ಯಾವಾಗಲೂ ನಿನ್ನ ಹುಟ್ಟು ಗುಣ ಹೀಗೆ. ಆ ಸಮಯ ಈ ಸಮಯ ಎಂದಿಲ್ಲ. ಮುಖಕ್ಕೆ ಮುಖವಿಡುವುದೊಂದೇ ಗೊತ್ತು. ಯಾರಾದರೂ ಕಂಡರೆ ಏನೆಂದಾರು? ಸುಲ್ತಾನನ ವರೆಗೆ ಸುದ್ದಿ ಹೋದರೆ ಏನಾದೀತು?

**ಮಿಶ್ರ.**—ಆಗುವುದೇನು ಬೀಬಿ? "ವೇದಮಂತ್ರೋಚ್ಚಾರ ಮಾಡುವ ಬ್ರಾಹ್ಮಣವರ್ಯನೊಬ್ಬನ ತೃಷಿತಾಧರವು ಒಬ್ಬಳು ಸುಂದರೀ ಮಣಿಯ ಕಪೋಲಪ್ರದೇಶದಲ್ಲಿ ವಿಹರಿಸುತ್ತಿದ್ದಿತು" ಎಂಬ ವಿಷಯವು ರಸವತ್ತಾಗಿ ರುಜುವಾದೀತು. ಅದರಿಂದ ಯಾರ ತಲೆ ಹೋಗುತ್ತದೆ?

**ಬೀಬಿ.**—ಹಾಳಾಗಲಿ ನಿನ್ನ ವೇದ! ನೀನು ಹೋದ ಕೆಲಸವೇ ನಾಯಿತು? ಅದನ್ನು ತಿಳಿಯಬೇಕೆಂದೇ ದಾಸಿಯನ್ನು ಕಳುಹಿಸಿದೆನು.

**ಮಿಶ್ರ.**—ಹೋದ ಕೆಲಸ ಹೋದ ಹಾಗಾಯಿತು.

**ಬೀಬಿ.**—ಹಾಗಾದರೆ ನಿನಗೆ ಮುಂದೇನು ಗತಿ?

**ಮಿಶ್ರ.**—ಬಂದ ಕೆಲಸ ಬಂದ ಹಾಗಾಯಿತು. (ಎಂದು ಸಮೀಪಕ್ಕೆ ಬರುವನು).

**ಬೀಬಿ.**—ನಿನ್ನ ತಲೆ ನೆಲಕ್ಕುರುಳುವ ಸಂದರ್ಭದಲ್ಲಿಯೂ ಈ ಹುಚ್ಚು!

**ಮಿಶ್ರ.**—ನನ್ನ ತಲೆ ನೆಲಕ್ಕೆ ಬೀಳುವಲ್ಲಿ ನಿನ್ನ ತೊಡೆ ಇದ್ದೇ ಇದೆಯಲ್ಲ.

**ಬೀಬಿ.**—ಎಲಾ, ಬಡಹಾರುವ! ಇಲ್ಲಿ ಬೇಡ ನಿನ್ನ ಮರುಳಾಟ.

**ಮಿಶ್ರ.**—'ಹಾರುವ' ಎಂದು ಹೇಳಿದರೆ ಸಾಲದು. 'ಹಾರಬೇಕು. ಬಾ ಇತ್ತ! (ಇಬ್ಬರೂ ಬಳಿಯಲ್ಲಿಯೇ ಇರುವ ಹೂದೋಟಕ್ಕೆ ಹೋಗುವರು).

**ಮಿಶ್ರ.**—ಆಹಾ! ನಂದನವನದಲ್ಲಿ ಬೀಸುತ್ತಿರುವ ಮಂದ ಮಾರುತ ನಲ್ಲಿ ಎಷ್ಟು ತಂಪು! ಎಷ್ಟು ಕಂಪು! ಆದರೂ ಅವನು ಹೆಮ್ಮೆಪಡಬೇಕಾಗಿಲ್ಲ, ಬೀಬಿ. ನಿನ್ನ ಉಸಿರಲ್ಲಿರುವಷ್ಟು ತಂಪೂ ಇಲ್ಲ, ಕಂಪೂ ಇಲ್ಲ ಅವನಿಗೆ. ನೋಡು ಅಲ್ಲೊಂದು ಮಲ್ಲಿಕಾಲತೆ ಹೇಗೆ ಹೂವರಳಿಸಿ ನಿಂತಿದೆ! ನಿನ್ನ ಕಡೆಗಣ್ಣಿನಿಂದ ಕೋರೆನೋಟವು ಒಡೆದು ಮೂಡಿದಂತೆ, ಅಲ್ಲವೇ? ಆ ಪರ್ವತದಾಚೆ ರಕ್ತಮಯನಾದ ಸೂರ್ಯನು ಉದಿಸುತ್ತಿದ್ದಾನೆ. ಈಗಲೂ ನನಗೆ ನೆನಪುಂಟು, ಬೀಬಿ! ಅಂದು ನಮ್ಮ ಪ್ರಥಮದರ್ಶನ. ಶಹನ ವಿಜಯೋತ್ಸವ. ಸ್ತ್ರೀಪುರುಷರೆಲ್ಲ ಮದಿರಾನಂದದಿಂದ ಕುಣಿಯುತ್ತಿದ್ದರು. ನಾನೂ ಕುಣಿಯುತ್ತಿದ್ದೆ; ನೀನೂ ಕುಣಿಯುತ್ತಿದ್ದೆ. ಏನೋ ಒಂದು ಶಕ್ತಿ, ಮೋಡದಿಂದ ಹೊರಟು ನೆಲಕ್ಕೆ ಹೊಡೆಯುತ್ತದೆಯಲ್ಲ, ಅಂತಹ ದೊಂದು ಶಕ್ತಿ, ನನ್ನನ್ನು ಹೊಡೆದು ನಿಲ್ಲಿಸಿಬಿಟ್ಟಿತು. ನಿನ್ನನ್ನೇ ಬದ್ಧದೃಷ್ಟಿ ಯಿಂದ ನೋಡಿ ನಿಂತೆ. ನಿನ್ನ ಕಣ್ಣತಾರೆ ಕೆಂಪಾಗಿ ಘೂರ್ಣಿಸುತ್ತಿದ್ದಿತು. ಪಾನದಿಂದ ಕೆಂಪಾಗಿದ್ದಿರಬಹುದು; ಆದರೂ ನನ್ನ ವಿಷಯಕವಾದ ಅನುರಾಗವು ಆ ಕಡೆಗಣ್ಣಿಗೆ, ಸ್ವಲ್ಪವೇ ಆಗಲಿ, ಕೆಂಬಣ್ಣದ ಕಪ್ಪವನ್ನು ಕೊಟ್ಟದ್ದಿತೊ ಇಲ್ಲವೊ?

**ಬೀಬಿ.**—ಸಾಕು ನಿನ್ನ ಹಾಳು ಕತೆ. ಬೇಗಮರಿಂದ ಕರೆ ಈಗ ಬರ ಬಹುದು. ಮಾತಾಡುವುದಿತ್ತು. ಆದರೆ ಇಂದು ಸ್ಥಿತಿವಿಪರೀತವಾಗಿದೆ. ಹೋಗಿ ಬಿಡುತ್ತೇನೆ. (ನಾಲ್ಕಡಿ ಆಚೆಗೆ ನಡೆಯುವಳು).

**ಮಿಶ್ರ.**—ಇವಳ ಸಡಗರವನ್ನೆಲ್ಲಾ ನಾನರಿಯೆನೇ? (ಎಂದು ಸೆರ ಗನ್ನು ಹಿಡಿಯುವನು).

**ಬೀಬಿ.**—ನಾನು ಸಲಿಗೆಯಿಂದಾಡಿದರೆ ಕೋಪಿಸಬಾರದು. ನಿನ್ನ ಬುದ್ಧಿ ಕೆಟ್ಟಿದೆ.

**ಮಿಶ್ರ** (ಆತ್ಮಗತ).—ಹೆಂಗಸರಿಗೆ ಸಲಿಗೆ ಕೊಟ್ಟರೆ ಆಗುವ ಹಣೆ ಬರಹ ಇದು. ಏಕವಚನದಲ್ಲಿ ಸಂಬೋಧಿಸಲು ನಾನೇ ಅಪ್ಪಣೆ ಕೊಟ್ಟೆ. ತಲೆ ಕೆಟ್ಟಿದೆಯೆಂದು ಬಯ್ಯುವ ಅಧಿಕಾರವನ್ನು ಅವಳೇ ಕಿತ್ತುಕೊಂಡಳು. (ಪ್ರಕಾಶ) ನನಗೆ ಬುದ್ಧಿಯಿದೆ, ಕಡೆಗೆ ಕೆಡುವುದಕ್ಕಾದರೂ ಬುದ್ಧಿಯಿದೆ;. ನಿನಗೆ ಅದೂ ಇಲ್ಲ.

**ಬೀಬಿ.**—ನಾಳೆ ಮುಂಜಾನೆ ನಿನ್ನನ್ನು ಶೂಲಕ್ಕೇರಿಸುವರಂತೆ!

**ಮಿಶ್ರ** (ಬೆಚ್ಚಿದಂತೆ ನಟಿಸಿ).—ಯಾವ ಅಪರಾಧಕ್ಕಾಗಿ ?

**ಬೀಬಿ.**—ಹೋದ ಹಾಗೆಯೇ ಬಂದುದಕ್ಕಾಗಿ.

**ಮಿಶ್ರ.**—ನಾನೇನು ಮಾಡಬೇಕು ? ಈ ಬೋಳು ಮುಖದಲ್ಲಿ ಮೀಸೆ ಸರ್ವಥಾ ಮೂಡುವುದಿಲ್ಲ. ಅದನ್ನು ಬೆಳೆಯಿಸಿಕೊಂಡಾದರೂ ಬರುತ್ತಿದ್ದೆ. ಶೂಲಾರೋಹಣ ತಪ್ಪುತ್ತಿದ್ದಿತು.

**ಬೀಬಿ.**—ಮೀಸೆಯಿದ್ದರೇನು ? ಹುಡುಗಿಯನ್ನು ತಾರದಿದ್ದುದಕ್ಕಾಗಿ ಶೂಲ.

**ಮಿಶ್ರ.**—ಓಹೋ! ಆ ವಿಚಾರವೋ ? ನನ್ನನ್ನು ಶೂಲಕ್ಕೇರಿಸುವ ಮಾತು ಹಾಗಿರಲಿ.! ನನಗೆ ಮುಖದಲ್ಲೆರಡು ಕೂದಲಾದರೂ ಇರುತ್ತಿದ್ದರೆ, ಅರಸು ಬಂಗಾರವನ್ನು ಕಟ್ಟಿಸುತ್ತಿದ್ದನು.

**ಬೀಬಿ** (ಆಶ್ಚರ್ಯದಿಂದ).—ಹಾಗಾದರೆ, ವಿಜಯಿಗಳಾಗಿ ಬಂದಿರಿ!

**ಮಿಶ್ರ.**—ಸಾಕು, ಏಕವಚನವೇ ಸಾಕು. ವಿಜಯಹೊಂದಿ ಬಂದುದೇನೋ ನಿಜ.

**ಬೀಬಿ.**—ಕಾಫರನಾದರೇನು ? ಗುಣವಂತ!

**ಮಿಶ್ರ.**—ಹೌದು; ನಾನು ಕಾಫರ. ಆದರೂ ಗುಣವಂತ. ಕೈಯಲ್ಲಿ ಕಾಸಿಲ್ಲದಿದ್ದರೆ ಕಾಫರ. ಈಗ ಹಣ ಬರುವ ಸಂದರ್ಭದಲ್ಲಿ ಗುಣವಂತ.

**ಬೀಬಿ.**—ಹಾಗೆ ಹೇಳಬಾರದು, ಪ್ರಿಯ!

**ಮಿಶ್ರ.**—ಹೌದು, ಈಗ ಬಹಳ ಪ್ರಿಯ. ಮೊದಲು ಅಗ್ಗ!

**ಬೀಬಿ.**—ನನ್ನ ಪ್ರೀತಿಯಲ್ಲಿ ಎಂದಾದರೂ ಕಲ್ಮಷವನ್ನು ಕಂಡಿದ್ದಿರೇ ?

**ಮಿಶ್ರ.**—ಪ್ರೀತಿಯನ್ನು ಕಂಡರಲ್ಲವೆ ಕಲ್ಮಷವನ್ನು ಕಾಣುವುದು ?

**ಬೀಬಿ** (ಬಿಕ್ಕಿ ಬಿಕ್ಕಿ ಅಳುತ್ತಾ).—ನನ್ನೆದೆಯನ್ನು ಬಿಚ್ಚಿ ತೋರಿಸಿದ ಮೇಲೆಯೂ ಇಂತಹ ನಿಂದೆ!

**ಮಿಶ್ರ** (ಮನಸ್ಸು ಕರಗಿದಂತೆ ನಟಿಸಿ ಅವಳ ಕೈ ಹಿಡಿದು).—ನೀನು ಹೃದಯವನ್ನು ಬಿಚ್ಚಿದುದೂ ಹೌದು; ನಾನು ಪ್ರೀತಿಯನ್ನು ಕಂಡುದೂ ಹೌದು. ನಿನ್ನೊಡನೆ ಎಲ್ಲವನ್ನೂ ಹೇಳಿಬಿಡುತ್ತೇನೆ. ನಾನು ಹೋದ ಕಾರ್ಯ ಯಶಸ್ವಿಯಾಗಿದೆ. ಹೆಣ್ಣು ಕಣ್ಣಮುಂದಿರುವಳು; ಆದರೆ ಒಂದು ತೆರೆ ಮಾತ್ರ ಅಡ್ಡ.

**ಬೀಬಿ.**—ಹಾಗೆಂದರೇನು ?

**ಮಿಶ್ರ.**—ಇನ್ನು ಮೂರು ತಿಂಗಳೊಳಗೆ ಶಹನ ಇಷ್ಟ ಸಿದ್ಧಿಯಾಗುವುದು.

**ಬೀಬಿ.**—ಅದೆಲ್ಲಾ ನಿಜ ?

**ಮಿಶ್ರ.**—ತಿಳಿಯಿತು ಬೀಬಿ. ಅಂದೇ ನಾನು ಹೇಳಿರಲಿಲ್ಲವೇ ? 'ಕೈಯಲ್ಲಿ ತಾಮ್ರದ ಚಿಕ್ಕಾಸಿಲ್ಲ. ಒಂದು ಕುಪ್ಪಸ ತೊಡಿಸುವೆನೆಂದರೆ ಹತ್ತು ಮನೆಗೆ ದೇಶಾವರ ಹೋಗಿ ಹಣ ತರಬೇಕು.' ಎಂಬುದನ್ನು ನಾನು ಆಗಲೇ ಸೂಚಿಸಿದ್ದೆನಲ್ಲವೇ ?

**ಬೀಬಿ.**—ಹುಂ. ಈಗ ?

**ಮಿಶ್ರ.**—ಸುಲ್ತಾನನು ಏನಾದರೂ ಕೊಟ್ಟರೆ, ಅದನ್ನು ನೀನೂ ಅನುಭವಿಸುವೆ.

**ಬೀಬಿ** (ಸಂತೋಷವನ್ನು ನಟಿಸಿ).—ಆಗ ಮರೆತರೆ ?

**ಮಿಶ್ರ.**—ನಾನು ಮರೆತರೂ ನೀನು ಮರೆಯಬೇಡ. ನೆನಪು ಮಾಡು.

**ಬೀಬಿ.**—ಹಾಗೆಂದರೇನು ? ಅಂದು ನೀನು ಬಡವನಾಗಿದ್ದೆ. ನಿನ್ನ ರೂಪಕ್ಕಾಗಿ, ಸೌಂದರ್ಯಕ್ಕಾಗಿ ನಾನು ಸೋತುದು ತಿಳಿಯಿತೇ ?

**ಮಿಶ್ರ.**—ಅಂದು ಯೌವನವಿತ್ತು.

**ಬೀಬಿ.**—ಹಾಗೆಲ್ಲಾ ಹೇಳಬಾರದು, ವಿಪ್ರ!

**ಮಿಶ್ರ.**—ಹಾಗಾದರೆ ನೀನೂ ಮಾತಾಡಬಾರದು. ನನ್ನಲ್ಲಿ ಪ್ರಶ್ನೆಗಳನ್ನು ಕೇಳದೆ ವಿಶ್ವಾಸವಿಟ್ಟಿರಬೇಕು.

**ಬೀಬಿ.**—ಆಯಿತು; ಭಾಷೆಕೊಡು.

**ಮಿಶ್ರ.**—ಭಾಷೆ ಯಾಕೆ ಬೀಬಿ?

**ಬೀಬಿ.**—ವಿಶ್ವಾಸವಿಡುವುದಕ್ಕೆ.

**ಮಿಶ್ರ.**—ಭಾಷೆಕೊಡುವುದೆಷ್ಟು ಸುಲಭವೋ ಅಷ್ಟೇ ಸುಲಭ ಮುರಿಯುವುದಕ್ಕೂ. ಆದುದರಿಂದ ದೊಡ್ಡವರಲ್ಲಿ ಹಾಗೆಲ್ಲಾ ಆಡಬಾರದು.

**ಬೀಬಿ.**—ಅಪ್ಪಣೆ.

**ಮಿಶ್ರ.**—ನಿನ್ನ ಹೆಸರು ಬಲು ಚಂದ, ಬೀಬಿ!

**ಬೀಬಿ.**—(ಸುಮ್ಮನೆ ನಿಂತಿರುವಳು).

**ಮಿಶ್ರ.**—ಅಷ್ಟೇ ಚಂದ ಮುಖವೂ.

**ಬೀಬಿ.**—(ತಲೆಯನ್ನು ಬಾಗಿಸುವಳು).

**ಮಿಶ್ರ.**—ಭಾಷೆ ಬೇಡ, ಬೀಬಿ! ಬಾ ಸಮೀಪಕ್ಕೆ (ಎಂದು ಅವಳ ಕೈ ಹಿಡಿವನು).

[ಆಗ ಯಾರೋ ಬೀಬಿಯನ್ನು ಕರೆಯುವರು].

**ಬೀಬಿ**—ಈ ಕಣ್ಣೀರಿನಾಣೆ! ನನ್ನನ್ನು ಮರೆಯಬಾರದು.

**ಮಿಶ್ರ.**—ನಿನ್ನ ಕೊರಳ ಮುತ್ತಿನಾಣೆ ಮರೆಯುವುದಿಲ್ಲ.

[**ಬೀಬಿ ಹೋಗುವಳು**].

**ಮಿಶ್ರ.**—ಎಂತಹ ಚಪಲೆ ಈಕೆ? ಮೊದಲು ಹಾರುವ! ಮತ್ತೆ ಬ್ರಾಹ್ಮಣ! ಗೊಡ್ಡು ಬ್ರಾಹ್ಮಣ! ಹುಚ್ಚ! ಭ್ರಾಂತ! ಎಂತೆಂತಹ ಬಿರುದು ನನಗೆ? ಹೀಗೆ ಅಬದ್ಧವಾಗಿ ಆಡುವುದೇಕೆ? ಎಂದು ಕೇಳಿದರೆ ಇದೇ ಪ್ರೇಮದ ಚಿಹ್ನೆಯೆನ್ನುವಳು! ಆಹಾ ಈ ಯುಗದ ನಾರಿಯರ ಪ್ರೇಮ ಕೋಲಾಹಲವೆ! ಪ್ರಿಯರನ್ನು 'ನಾಯಿ!' 'ಬೆಕ್ಕು!' ಎಂದೂ ಸಂಬೋಧಿಸುವುದು! ಬೀಬಿಯ ಅದೇ ಪ್ರೇಮವು ಈಗ 'ಬ್ರಾಹ್ಮಣರೇ ಮರೆಯಬೇಡಿರಿ, ಕಣ್ಣೀರಿನಾಣೆ!' ಎಂದು ಹೇಳಿಸುವುದಲ್ಲಾ! ಭೂಮಿಗೆ ಮಹಾ ಪ್ರಲಯವೊದಗ ಬೇಕಾದರೆ, ಒಂದು ದಿನ ಸ್ತ್ರೀಯರ ಕಣ್ಣೀರಿನಿಂದಲೇ

ಅದಕ್ಕೆ ಸನ್ನಾಹವಾಗಬೇಕು. ಅದನ್ನು ನಂಬಿದ ಕಾರಣದಿಂದಲ್ಲವೇ ಈ ಪುನೀತ ಬ್ರಾಹ್ಮಣ, ತಾತ್ವಿಕ ಬ್ರಾಹ್ಮಣ, ಕಾಮವಾಸನೆಯಿರದ ಸ್ಥಾಣು, ಈ ಮಧುಸೂದನ, ನಾನು ಕೂಡ ಇವಳ ಕಣ್ಣೋಟದಲ್ಲಿ ಸೆರೆಯಾಳಾದುದು! ಆಗಲಿ. ಇದು ಆನುಷಂಗಿಕಸುಖವಾಯಿತು. ವಿನೋದಕಾಲಕ್ಷೇಪ ವಾಯಿತು. ಇಂತಹ ಸುಖಗಳಿಂದ ಹೆಚ್ಚಿನ ಲಾಭನಷ್ಟಗಳೇನೂ ಇಲ್ಲ. ಸ್ವಪ್ನಗಳನ್ನು ಕಂಡಷ್ಟೇ ಸುಖದುಃಖಗಳು ಇವುಗಳಿಂದ. ಆಗಲಿ. ಇನ್ನು ಗೃಹಸ್ಥಾಶ್ರಮಕ್ಕೆ ಕಾಲಿಡುವಾಗ, ಈ ಯುವನಿಯನ್ನೇ ಊರುಗೋಲಾಗಿ ಮಾಡಬೇಕೇ? ರಾಜಕೀಯವಿಷಯಗಳಲ್ಲಿ ನೀತೀರೀತಿಯೆಂದಿಲ್ಲ. ರಾಜ ಕೀಯ ವಿಷಯಗಳಿಂದ ನಿವೃತ್ತನಾಗುವಾಗ ಇವಳ ಪ್ರೇಮಜಾಲದಿಂದಲೂ ವಿಮುಕ್ತನಾಗುತ್ತೇನೆ. ಮತ್ತೆ ಮದುವೆಯ ವಿಚಾರವೆ? ಒಬ್ಬ ಸಂಸ್ಕೃತ ಕವಿ ಹೇಳಿದ್ದಾನೆ 'ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ' ಎಂದು. ಅವನ ವಾಕ್ಯವೇ ನನ್ನ ಭವಿಷ್ಯಕ್ಕೆ ಆಧಾರ. ಶಾಶ್ವತ ಸುಖಾನುಭವವಕ್ಕೆ ಅಮೂಲ್ಯ ವಸ್ತುಗಳನ್ನು ಕೊಂಡುಕೊಳ್ಳಬೇಕಲ್ಲದೆ, ಕಾಸಿನ ಬೆಲೆಯುಳ್ಳ ಇಂತಹ ವಸ್ತುಗಳಿಂದ ಏನು ಪ್ರಯೋಜನ?

[ಹೋಗುವನು].

---

## ದೃಶ್ಯ ೨

[ಸುಲ್ತಾನನ ಸೇನಾಶಿಬಿರಮಧ್ಯದಲ್ಲಿ ಅಜೀಮನೊಬ್ಬನೇ ಚಿಂತಾಮಗ್ನನಾಗಿ ಕುಳಿತಿರುವನು.]

**ಅಜೀಮ್ ಖಾನ.**—ಎಲ್ಲಿಗೆ ಹೋದರೂ ನಿರಾಶೆ. ಅಲ್ಪನಾಗಿ ಹುಟ್ಟಿದರೂ ನಿರಾಶೆ. ಮಹಾಪದವಿ ಸಿಕ್ಕಿದರೂ ನಿರಾಶೆ. ಆಶಾನಿರಾಶೆಗಳ ಪ್ರಾಪ್ತಿಯು ಸ್ಥಾನವಿಶೇಷಗಳನ್ನು ಹೊಂದಿಕೊಂಡಿಲ್ಲ. ಕೆಲವರು ವಸಂತ ಪುತ್ರರು. ಅವರೆಲ್ಲಿಗೆ ನಡೆದರೂ ಹೊಸಹೊಸ ಬಯಕೆಗಳು ಕೊನರಿ, ಅರಳಿ ಫಲಕೊಡುತ್ತವೆ. ಸೃಷ್ಟಿಯೇ ಪ್ರಸನ್ನಸುಂದರವೇಷದಿಂದ ಅವರ ದೃಷ್ಟಿಗೆ ಸ್ವರ್ಗಸೌಂದರ್ಯದ ಚರಮಚಿತ್ರವನ್ನು ತೋರಿಸುವುದು. ಇನ್ನು ಕೆಲವರು ಶಿಶಿರಕುಮಾರರು. ಅವರು ಹೋದಲ್ಲಿ ಬಂದಲ್ಲಿ, ಅದುವರೆಗೆ ನಲಿದಾಡುತ್ತಿದ್ದ ಪ್ರಾಕೃತಿಕಸುಖಸೌಂದರ್ಯವೆಲ್ಲವೂ ಮುದುರಿ, ಬಾಡಿ, ಉದುರಿ ಹೋಗುವುದು. ಅಭಿಲಾಷೆಯು ಮಾತ್ರ ಸ್ಥಾಣುವಾಗಿ ನಿಂತು ಕ್ರಮೇಣ ಕೊಳೆತು ಬೀಳುವುದು. ಅಂಥವರಲ್ಲಿ ನಾನೊಬ್ಬನು. ಒಳ್ಳೆಯ ಉದ್ಯೋಗವಿಲ್ಲವೆಂದು ಹೇಳಲೇ? ಅದು ಸಾಧ್ಯವಿಲ್ಲ; ಸುಲ್ತಾನನ ಸೇನಾಪತಿಯಾಗಿದ್ದೇನೆ. ಮೊದಲು ಅರಮನೆಯ ಚಾಕರಿಯಲ್ಲಿದ್ದಾಗ, ಸೈನ್ಯಾಧ್ಯಕ್ಷಪದವಿಯೇ ಸ್ವರ್ಗಪದವಿಯೆಂಬ ಭಾವನೆಯಿದ್ದಿತು. ಈಗ, ಅದು ದೊರೆತಿರುವಾಗ ಇನ್ನಾವುದೋ ಒಂದು ಧ್ಯೇಯವು ಕಣ್ಣ ಮುಂದೆ ಕಾಣಿಸುವುದು. ಮಹತ್ವಾಕಾಂಕ್ಷೆಯೆಂಬುದೇ ಹಾಗೆ. ಮಹತ್ವವೆಂಬ ಪದಕ್ಕೆ ಸರಿಯಾದ ಲಕ್ಷಣವಿಲ್ಲ. ಅದನ್ನನುಸರಿಸಿಕೊಂಡು ಬೆಂಬತ್ತುವ ಕಾಂಕ್ಷೆಗೆ ವಿರತಿಯೂ ಇಲ್ಲ. ಆದುದರಿಂದ ಮಹತ್ವಾಕಾಂಕ್ಷಿಯಾದ ಮಾನವನು, ಆಕಾಶದ ಪರಿಧಿಯನ್ನು ಮುಟ್ಟಬೇಕೆಂದು ಹಾರಿ ಓಡುವ ಮೂಢನಂತೆ ಗಿರಿಗಳನ್ನೊ ಕಂದರಗಳನ್ನೊ ಹತ್ತಿಳಿದು, ನದಿಗಳನ್ನೊ ಸಾಗರಗಳನ್ನೊ ದಾಟಿ, ಎಡವಿತಡವಿ ಸೋತುಹೋಗುತ್ತಾನೆ... ಆದರೂ ನೀಚಭೂಮಿಗೆ ಆಶೆಯು ಹರಿಯುವುದಿಲ್ಲವಲ್ಲ! (ಸ್ವಲ್ಪ ಚಿಂತಿಸಿ) ಇವನು ಸುಲ್ತಾನನೆಂದೂ, ನಾನು ಬರಿಯ ಖಾನನೆಂದೂ, ಹೆಚ್ಚೆಂದರೆ ಆತನ ಸೇನಾಧಿಪತಿ, ಸಂಬಳ ತಿಂದು ಅವನ ಸೇವೆಮಾಡುವ ಒಬ್ಬ ಅಧಿಕಾರಿ, ಎಂದೂ ಭೇದ ಕಲ್ಪನೆಯನ್ನು ಮಾಡಿದವನಾರು? ಈ ಭೇದವೇ ಮಾನವಕುಟುಂಬದ

ಕುಠಾರ. ಇವನು ಸುಲ್ತಾನ್, ಯಾಕೆ? ಅಂತಹ ರಾಜ ಕುಟುಂಬ ದಲ್ಲಿ ಹುಟ್ಟಿದನೆಂಬುದರಿಂದ. ಆ ರಾಜಕುಟುಂಬವನ್ನು ಬಳೆಯಿಸುವುದಕ್ಕೆ ನಿಃಸ್ವಾರ್ಥರಾದ ಜನರೆಷ್ಟೋ ತಮ್ಮ ರಕ್ತವನ್ನು ಬಸಿದಿದ್ದಾರೆ ಎಂಬುದರಿಂದ ಆ ರಾಜತ್ವ! ಆ ಎರಡಕ್ಷರದ ಹೆಸರನ್ನು ಯಾರೋ ಈತನಿಗೆ ಇಟ್ಟು, ತಲೆಗೊಂದು ಕಿರೀಟವನ್ನು ಕೈಗೊಂಡು ದಂಡವನ್ನು ಕೊಟ್ಟುದರಿಂದ ಈತನು ರಾಜನಾದನು! ಹಾ! ಹಾಳು ಭೇದವೇ! ರಾಜನಾದರೇನು? ಅವನ ರಕ್ತಕ್ಕೂ ನಮ್ಮಂಥವರ ರಕ್ತಕ್ಕೂ ವ್ಯತ್ಯಾಸವೇನೂ ಇಲ್ಲ. ರಾಜನಿಗೆ ಊಟವಿಲ್ಲದೆ ಹೊಟ್ಟೆ ತುಂಬುವುದಿಲ್ಲ. ನಮ್ಮಂತೆಯೇ ತುತ್ತು ಬೇಕು. ರಾಜರಿಗೆ ನಿದ್ರೆಯಿಲ್ಲವೆಂದಿಲ್ಲ. ನೀರಡಿಕೆ, ಬಳಲಿಕೆ ಮೊದಲಾದ ಯಾವ ದುಃಖಗಳೂ ಅವರಿಗೆ ಇಲ್ಲವೆಂದಿಲ್ಲ. ಆದರೂ ರಾಜರು ರಾಜರೇ! ಅಲ್ಲನು ಇವರಿಗೆ ತನ್ನ ಸೃಷ್ಟಿಯನ್ನು ಮಾರಿದನೇ? ಕುರುಬನಿಗೆ ಕುರಿಹಿಂಡನ್ನು ಒಪ್ಪಿಸುವಂತೆ ಈ ಪ್ರಜಾವರ್ಗವನ್ನು ಇವನಿಗೆ ದತ್ತಮಾಡಿದನೇ! ಹುಟ್ಟು ವಾಗಲೇ ಈತನ ತಲೆಯ ಮೇಲೆ ಮಣಿಕಿರೀಟವಿದ್ದಿತೇ? ನನಗಂತೂ ಅರ್ಥವಾಗುವುದೇ ಇಲ್ಲ. ಈತನು ರಾಜನಂತೆ. ನಾನು ದಾಸನಂತೆ... ಎಲ್ಲರೂ ಅಲ್ಲನ ಮಕ್ಕಳೆಂದು ಕುರಾನು ಹೇಳುತ್ತದೆ. ಒಬ್ಬ ಮಗನು ಸುಲ್ತಾನನಾಗಬಹುದಾದರೆ ಬೇರೆ ಮಕ್ಕಳು ಏಕೆ ಆ ಪದವಿಗೇರಬಾರದು?

[ಅಷ್ಟರಲ್ಲಿ ನುರುಲ್ಲನ ಪ್ರವೇಶ. ಅಜೀಮನು ಅವನ ಕಡೆಗೆ ತಿರುಗಿ]

ಯಾರು? ನುರುಲ್ಲ! ಇತ್ತ ಬಾ! ಕುಳಿತುಕೊ.

**ನುರುಲ್ಲ.**—ಬರುತ್ತೇನೆ, ಖಾವಂದರೆ! ಕುಳಿತುಕೊಳ್ಳುವುದಿಲ್ಲ.

**ಅಜೀಮ.**—ಓಹೊ! ತಿಳಿಯಿತು. ಅರಸನಾದವನು ಆಳೆಂಬವನಿಗೆ ಕಲಿಸಿದ ಬುದ್ಧಿಯಿದು! ಅಲ್ಲವೆ?

**ನುರುಲ್ಲ.**—ಹಾಗೆಂದರೇನು? ಯಾವ ಅರಸ? ಯಾವ ಆಳು?

**ಅಜೀಮ.**—ಕುಳಿತುಕೋ! ಹೇಳುತ್ತೇನೆ.

[ನುರುಲ್ಲನು ಹಿಂದೆ ಮುಂದೆ ನೋಡುವನು].

**ಅಜೀಮ.**—ನನ್ನ ಅಪ್ಪಣೆಯಾಗಿದೆ, ಕುಳಿತುಕೊ. ಸೇನಾನಿಯಾಗಿ ಅಪ್ಪಣೆ ಕೊಡುತ್ತೇನೆ, ಕುಳಿತುಕೊ!

**ನುರುಲ್ಲ.**—ದೊಡ್ಡವರ ಮುಂದೆ ನನ್ನಂಥವರು...

**ಅಜೀಮ.**—ದೊಡ್ಡವರು. ಯಾವುದರಲ್ಲಿ? ದೊಡ್ಡ ಮೀಸೆಯಲ್ಲಿ? ದೊಡ್ಡ ಮುಂಡಾಸಿನಲ್ಲಿ?

**ನುರುಲ್ಲ.**—ಹಾಗೆನ್ನಬಾರದು, ಖಾವಂದ, ತಾವು ಸೈನ್ಯಾಧ್ಯಕ್ಷರಾಗಿದ್ದೀರಿ.

**ಅಜೀಮ.**—ಆ ಹಾಳು ಭೇದವೇ ಲೋಕವನ್ನು ಕೊಂದಿತು. ಅದನ್ನು ಇಲ್ಲದಂತೆ ಮಾಡಬೇಕೆಂಬುದೇ ನನ್ನ ಸಂಕಲ್ಪ.

**ನುರುಲ್ಲ.**—ಅದು ಸಾಧ್ಯವೇ, ಮಹಾರಾಜ! ಒಬ್ಬನು ಇನ್ನೊಬ್ಬನಿಂದ ಭಿನ್ನನಾಗಿರುವಷ್ಟು ಕಾಲ, ಭೇದವು ಇದ್ದೇ ಇರುವುದು.

**ಅಜೀಮ.**—ಸ್ವಾಭಾವಿಕ ಭೇದವು ಇರಲಿ; ಕೃತ್ರಿಮಭಿನ್ನತೆ ಬೇಡ.

**ನುರುಲ್ಲ.**—ಕೆಲವರು ಅರಸರಾಗಿ ಹುಟ್ಟುವುದೂ ಇನ್ನು ಕೆಲವರು ಆಳುಗಳೆನ್ನಿಸುವುದೂ ಸ್ವಭಾವಸಿದ್ಧವಾಗಿ.

**ಅಜೀಮ.**—ಕೆಲವರು—ಆಗಿರಬಹುದು. ಆದರೆ ನಮ್ಮ ಕಣ್ಣ ಮುಂದೆ ಮಕುಟಧಾರಿಗಳಾಗಿ ಆಡುಬೊಂಬೆಗಳಂತೆ ಕಾಣುವ ಎಲ್ಲ ವೇಷಗಳು ಸ್ವಾಭಾವಿಕವಲ್ಲ.

**ನುರುಲ್ಲ.**—ರಾಜಪುತ್ರರಾಗಿ ಹುಟ್ಟುವವರು ರಾಜರೇ ಆಗುತ್ತಾರೆ.

**ಅಜೀಮ.**—ಇಂತಹ ನಿಷ್ಪೌರುಷ ರಾಜತ್ವಕ್ಕೆ ತಿಲಾಂಜಲಿ ಕೊಡಬೇಕು.

**ನುರುಲ್ಲ.**—ಸಾಧ್ಯವಲ್ಲ.

**ಅಜೀಮ.**—ಭೇದವೆಂಬ ಆ ಕಬ್ಬಿಣದ ಸಂಕಲೆಯಲ್ಲಿ ಬಂಧಿತರಾಗಿದ್ದು ಅದನ್ನೇ ಸುಖವೆಂದೂ ಅದನ್ನೇ ಸೇವೆಯೆಂದೂ ಪ್ರಜಾಧರ್ಮವೆಂದೂ ಹೇಳುವವರಿಗೆ ಸಾಧ್ಯವಾವುದು?

**ನುರುಲ್ಲ.**—ಸಾಧ್ಯವಾವುದು? ಅಸಾಧ್ಯವಾವುದು? ಎಂಬುದಕ್ಕೆ ಕಾರ್ಯಪ್ರವೃತ್ತಿಯೇ ಒರೆಗಲ್ಲು.

**ಅಜೀಮ.** — ಇದೀಗ ಪೌರುಷವನ್ನು ಮೂದಲಿಸುವ ಮಾತು ಸಾಧ್ಯವೋ ಅಸಾಧ್ಯವೋ ಆ ಖುದಾನೇ ಹೇಳಬೇಕು. ಆದರೂ ಸದ್ಗುಣವಿಲ್ಲದೆ, ಯೋಗ್ಯತೆಯಿಲ್ಲದೆ, ಪ್ರಜಾಪ್ರೇಮವಿಲ್ಲದೆ ಕೇವಲ ರಾಜ ವಂಶದಲ್ಲಿ ಹುಟ್ಟಿದ ದೋಷದಿಂದ ಪ್ರಭುಗಳೆಂದು ಬಡಿವಾರ ಮಾಡುವವರನ್ನು ಸಾಮಾನ್ಯರ ತಳಕ್ಕೆ ಇಳಿಸಬೇಕೆಂಬುದೇ ನನ್ನ ಉದ್ದೇಶ.

**ನುರುಲ್ಲ.** — ಮಾತಾಡುತ್ತಾ ಕುಳಿತಿರುವುದಕ್ಕೆ ಇದು ಸಮಯವೇ, ಖಾವಂದ !

**ಅಜೀಮ.** — ಮತ್ತೇನು ಮಾಡಬೇಕೆನ್ನುವೆ ?

**ನುರುಲ್ಲ.** — ವೀರೋಚಿತವೃತ್ತಿ ಯಾವುದೋ ಅದನ್ನು.

**ಅಜೀಮ.** — ನಿಷ್ಪಾಪರೊಡನೆ ಕತ್ತಿಕಟ್ಟಿ ಹೋರಾಡುವುದು.

**ನುರುಲ್ಲ.** — ರಾಜನ ಹೆಸರಲ್ಲಿ.

**ಅಜೀಮ.** — ಆ ಹೆಸರನ್ನೇ ಕೇಳಿದರಾಗುವುದಿಲ್ಲ ನನಗೆ.

**ನುರುಲ್ಲ.** — ಯಾರ ಹೆಸರನ್ನು ಕೇಳಿದರಾಗುವುದಿಲ್ಲವೋ ಅವನ ಸಂಬಳ ತಿನ್ನುತ್ತೇವಲ್ಲಾ.

**ಅಜೀಮ.** — ಹುಂ; ಸಂಬಳ ತಿನ್ನುತ್ತೇವೆ.

**ನುರುಲ್ಲ.** — ಆ ಸಂಬಳಕ್ಕೆ ಕೈನೀಡುವಾಗಲೇ ವ್ಯಕ್ತಿಸ್ವಾತಂತ್ರ್ಯ ವನ್ನು ಮಾರುತ್ತೇವೆ.

**ಅಜೀಮ.** — ಹುಂ, ಮತ್ತೆ.

**ನುರುಲ್ಲ.** — ಮತ್ತೇನು ? . ಮತ್ತೆ ನಾವು ಅವನ ಗೂಟಕ್ಕೆ ಕಟ್ಟು ಬಿದ್ದ ತುರುಗಳಂತೆ.

**ಅಜೀಮ.** — ಹುಂ . . .

**ನುರುಲ್ಲ.** — ರಾಜರೆಲ್ಲ ದೇವತೆಗಳೆಂದಲ್ಲ. ಯಾರಿಂದಲೇ ಆಗಲಿ; ಲಾಭಹೊಂದಿ ಸ್ವಾರ್ಥಸಾಧನೆಯನ್ನು ಮಾಡುವಾಗ ಋಣವೆಂಬುದು ಬಳೆ ಯುತ್ತದೆ ಒಂದು ದೊಡ್ಡ ಪರ್ವತದಂತೆ.

**ಅಜೀಮ.** — ಅದನ್ನು ಲಂಘಿಸಲಾಗುವುದಿಲ್ಲ!

**ನುರುಲ್ಲ.**— ಆಗುವುದಿಲ್ಲ. ಒಂದು ವೇಳೆ ಪ್ರಯತ್ನಪಟ್ಟರೆ ಕಾಲು ಮುರಿಯುತ್ತದೆ.

**ಅಜೀಮ.**— ನೀನು ಶಹನ ಸಂದೇಶಹಾರಿಯಾಗಿ ಬಂದುದೇ ?

**ನುರುಲ್ಲ.**— ಸಂದೇಶವಿಲ್ಲದಿದ್ದರೆ ನಾನೇಕೆ ಬರಬೇಕು ?

**ಅಜೀಮ.**— ಹೇಳು ಅದನ್ನು!

**ನುರುಲ್ಲ.**— ಹೇಳುವುದೇನು? ಜನರ ಗುಜುಗುಜು ಕೇಳುವುದಿಲ್ಲವೇ ?

**ಅಜೀಮ.**— ಜನರು ಏನೂ ಹೇಳಬಹುದು.

**ನುರುಲ್ಲ.**— ಅರಸನ ಹೃದಯದಿಂದೆದ್ದ ತರಂಗಗಳೇ ಅವರ ಬಾಯಲ್ಲಿ ಶಬ್ದಿಸುತ್ತಿವೆ.

**ಅಜೀಮ.**— ಆಗಲಿ; ಸ್ಪಷ್ಟವಾಗಿ ಹೇಳು. ನಾನು ಶಹನ ಸಂಬಳ ತಿನ್ನುವವನೆಂಬುದರಿಂದ ಹೇಳು.

**ನುರುಲ್ಲ.**— ನಾಳೆ, ಅಭಿಯೋಗಕ್ಕೆ ಸಿದ್ಧರಾಗಿರಬೇಕೆಂಬುದಾಗಿ ಖಾವಂದರು ಸೈನಿಕರಿಗೆ ಅಜ್ಞೆಕೊಡಬೇಕಂತೆ.

**ಅಜೀಮ.**— ನಾವು ಶಹನ ಸೇವಕರಂತೆ ಹೇಳಿದಾಗ ಹೊರಡಲು ಸಿದ್ಧರಾಗಿರಬೇಕಲ್ಲವೇ ?

**ನುರುಲ್ಲ.**— ದೊಡ್ಡದೊಂದು ದಂಡಯಾತ್ರೆಯಂತೆ.

**ಅಜೀಮ.**— ಹುಂ; ಯಾವ ರಾಜ್ಯಾಧಿಪತಿಯನ್ನು ಅಂಕೆಗೆ ತರುವುದಕ್ಕೆ?

**ನುರುಲ್ಲ.**— ರಾಜ್ಯಾಧಿಪತಿಯನ್ನು ಬಗ್ಗಿಸುವುದಕ್ಕಲ್ಲ ; ಹುಡುಗಿಯೊಬ್ಬಳನ್ನು ಕೇಳುವುದಕ್ಕೆ!

**ಅಜೀಮ.**— ಇದೂ ರಾಜಕಾರ್ಯ!

**ನುರುಲ್ಲ.**— ಅರಸನು ಹೇಳುವುದೆಲ್ಲಾ ರಾಜಕಾರ್ಯ.

**ಅಜೀಮ.**— ಯಾವಾಗಲೂ ನನಗೆ ಹೀಗೆ ಆಲೋಚನೆ ಹುಟ್ಟುತ್ತದೆ. ಅಹಮದ್ ಶಹನು ರಾಜನಂತೆ. ನುರುಲ್ಲನು ರಾಜನಲ್ಲ; ಅಜೀಮಖಾನನು ಅಲ್ಲ; ಹೀಗೆ ಮಾಡಿದವರಾರು ?

**ನುರುಲ್ಲ.**—ಹೀಗೆ ಮಾಡಿದುದು ನಮ್ಮ 'ಕಿಸ್ಮತ್' !

**ಅಜೀಮು.**—ಹಾಳಾಯಿತು ದೈವ.

**ನುರುಲ್ಲ.**—ನಮ್ಮ ದೈವ ಹಾಳಾದುದರಿಂದಲ್ಲವೇ ಇಂತಹ ವಿಪರೀತ ಸ್ಥಿತಿಬಂದುದು.

**ಅಜೀಮು.**—ಯಾವಾಗಲೂ ನನಗೆ ಕಳವಳ, ನುರುಲ್ಲ. ಈ ಆತ್ಮವು ತನ್ನ ಸೆರೆಮನೆಯ ಗೂಡಿನಿಂದ ಹಾರಿಹೋಗಬೇಕೆಂದು ರೆಕ್ಕೆ ಹೊಡೆದು ಮೇಲೆ ಹಾರುತ್ತದೆ. ಆದರೆ ಯಾವುದೋ ಒಂದು ದೌರ್ಬಲ್ಯವು ಹಿಂದೆಳೆಯುತ್ತದೆ.

**ನುರುಲ್ಲ.**—ಸರಿ; ಈಗ (ಆತ್ಮಗತ) ಗಹನ ವಿಚಾರಶಿಖರದಿಂದ ಕೆಳಗಿಳಿದಿದ್ದಾನೆ. ಈಗಲೆ ಮೂದಲಿಸಬೇಕು; ಅಂತಹ ಸ್ಥಿತಿಯಲ್ಲಿಯೇ ನಮಗೆ ದೈವದ ನೆನಪಾಗುವುದು.

**ಅಜೀಮು.**—ಅಗಲಿ; ಈ ಪ್ರಲಯವು ಯಾವುದಕ್ಕಾಗಿ ?

**ನುರುಲ್ಲ.**—ಮೂರು ತಿಂಗಳೊಳಗೆ ಲೀಲಾವತಿಯನ್ನು ಶಹನ ಅಂತಃಪುರಕ್ಕೆ ಕಳುಹಿಸುವುದಾಗಿ ಆ ರಜಪೂತನು ಮಾತು ಕೊಟ್ಟಿದ್ದಾನೆ. ಆಡುಮಾತಿನಂತೆ ನಡೆದರಾಯಿತು. ನಡೆಯದಿದ್ದರೆ ಸೈನಿಕರಿಗೆ ಕೆಲಸ ಕೊಡಬೇಕಾದೀತು.

**ಅಜೀಮು.**—ಹುಂ.

**ನುರುಲ್ಲ.**—ಹುಡುಗಿಯನ್ನು ಕೊಟ್ಟರೆ ವಾದ್ಯಘೋಷದೊಡನೆ ಹಿಂದಿರುಗುವಿರಿ.

**ಅಜೀಮು.**—ವಾದ್ಯಘೋಷ! ನಮ್ಮ ಪಾರತಂತ್ರ್ಯವನ್ನು ಉದ್ಘೋಷಿಸುವ ವಾದ್ಯ!

**ನುರುಲ್ಲ.**—ಇಲ್ಲವಾದರೆ ತೋಳಿನ ತೀಟೆಯನ್ನು ತೀರಿಸುವಿರಿ.

**ಅಜೀಮು.**—ತೋಳಿನ ತೀಟೆಯನ್ನು ಕಳೆಯಬೇಕಾಗಿದ್ದರೆ. ಇಂತಹ ಅಕೃತ್ಯವನ್ನು ಮಾಡಬೇಕೇ ? ಒಂದು ಮರಕ್ಕೆ ಹಾಯ್ದರೆ ಸರಿ.

**ನುರುಲ್ಲ.**—ಯುದ್ಧಮಾಡಿ ವಿಜಯ ಪ್ರಾಪ್ತಿಯಾದರೆ ಭೂಲೋಕವೇ ಕೀರ್ತಿಯನ್ನು ಉದ್ಘೋಷಿಸುವುದು.

**ಅಜೀಮ.**—ಬೇಟೆಗಾರನ ನಾಯಿಗಳನ್ನು ಜನರು ಹೊಗಳುವಂತೆ!

**ನುರುಲ್ಲ.**—ಕೀರ್ತಿ ದೊರೆಯುವುದಿದ್ದರೆ—

**ಅಜೀಮ.**—ಅದೆಲ್ಲ ಸತ್ಯವೆ. ಆದರೆ ಆ ರಜಪೂತನ ಕನ್ಯೆ ನಾಳೆ 'ಗಂಡ' ಎನ್ನುವುದು ಯಾರನ್ನು?

**ನುರುಲ್ಲ** (ನಗುತ್ತ).—ನಮ್ಮನ್ನಲ್ಲ.

**ಅಜೀಮ.**—ನನ್ನದು ಒಂದೇ ಒಂದು ಪ್ರಶ್ನೆ. ಅವಳನ್ನು ಯಾಕೆ ವಶಮಾಡ ಬಾರದು?

**ನುರುಲ್ಲ** (ಆತ್ಮಗತ).—ಈಗ ತಿಳಿಯಿತು ಇವನ ವೈರಾಗ್ಯದ ಅರ್ಥ. (ಪ್ರಕಾಶ) ಅದು ಸುಲ್ತಾನನ ಬೇಟೆಯ ಜಿಂಕೆ. ಅವನ ಬಲೆಗೆ ಬೀಳಬೇಕು.

**ಅಜೀಮ.**—ಅದಕ್ಕಾಗಿ ರಕ್ತಸುರಿಸುವುದು ನಾವು.

**ನುರುಲ್ಲ.**—ನಾವು ಆತನಿಂದ ಸ್ವತಂತ್ರರಾಗಿದ್ದರೆ ಆ ಸಂದರ್ಭ ಬರುತ್ತಿರಲಿಲ್ಲ.

**ಅಜೀಮ.**—ಒಂದೇ ಮಾತಿನಿಂದ ಹೇಳುವುದಿದ್ದರೆ ಆತನು ಅವಳನ್ನು ವರಿಸಬಾರದು.

**ನುರುಲ್ಲ.**—ಯಾಕೆ?

**ಅಜೀಮ.**—ವರಿಸಬಾರದೆಂಬುದೇ ಕಾರಣ.

**ನುರುಲ್ಲ.**—ಆತನು ಶಹ.

**ಅಜೀಮ.**—ಆಗಿರಬಹುದು; ವೀರನಲ್ಲ.

**ನುರುಲ್ಲ.**—ನೀವು ವೀರರೆಂಬುದು ನಿಜ.

**ಅಜೀಮ.**—ವೀರಸ್ತ್ರೀಯರಿಗೆ ವೀರರೇ ಸತ್ಪಾತ್ರರು.

**ನುರುಲ್ಲ.**—ಆತನು ವೀರಾಧಿವೀರನು.

**ಅಜೀಮ.**—ನಮ್ಮಂಥವರು ಸಾಯಲು ಸಿದ್ಧರಾಗಿರುವಾಗ ಅವನಂಥವರು ವೀರರೇ ಸರಿ. ರೆಕ್ಕೆಯಿರುವಾಗ ಹಕ್ಕಿ ಹಾರದಿರುವುದೇ?

**ನುರುಲ್ಲ.**—ಹಾಗಾದರೇನು ಬಾದಶಹನ ವಿಜಯ ಯಾತ್ರೆಯಲ್ಲಿ ಖಾವಂದರು ನಾಯಕತ್ವವನ್ನು ವಹಿಸುವುದಿಲ್ಲ?

**ಅಜೀಮ.**—ದಾಸ್ಯವು ಯಾವಾಗಲೂ ಕಷ್ಟ. ಅದರಲ್ಲಿಯೂ ನಮ್ಮ ಹೃದಯದ ಮೆಚ್ಚುಗೆಯ ವಸ್ತುವನ್ನೇ ಇತರರ ಕೈಗೊಪ್ಪಿಸುವ ಸಂದರ್ಭ ಬರುವಾಗ, ಅದರ ಸಂಕಟಗಳು ಮತ್ತಷ್ಟು ತೀವ್ರವಾಗಿ ಅನುಭವಕ್ಕೆ ಬರುತ್ತವೆ.

**ನುರುಲ್ಲ.**—ಹುಂ.

**ಅಜೀಮ.**—ದಾಸ್ಯವಾದರೇನು ? ಯಜಮಾನ, ದಾಸ, ಇವರಿಬ್ಬರಿಗೂ ಸಾಮಾನ್ಯವಾದ ಕೆಲವು ಸಂಗತಿಗಳಿವೆ. ಅವುಗಳಲ್ಲಿ ಧರ್ಮಸಂಕಟ ಬರುವುದಿಲ್ಲ.

**ನುರುಲ್ಲ.**—ಮತ್ತಾವುದರಲ್ಲಿ ಧರ್ಮಸಂಕಟ ?

**ಅಜೀಮ.** ಮೊದಲೇ ಹೇಳಿದೆನಲ್ಲ. ದಾಸನೆನಿಸಿಕೊಳ್ಳುವವನು ಒಂದು ಒಡವೆಯ ಮೇಲೆ ಕಣ್ಣಿಡುವುದು. ಯಜಮಾನನೂ ಅದರ ಮೇಲೆಯೇ ಕಣ್ಣಿಡುವುದು. ದಾಸನಾದವನ ರಕ್ತಸೇಚನದಿಂದ ಅದು ವಶವಾಗುವುದು. ಯಜಮಾನನಿಗೆ ಸೇರುವುದು, ಇಂತಹ ಸ್ಥಿತಿಯು ಅಸಹನೀಯ, ನುರುಲ್ಲ. ಇವನು ಅವನ ಹಂಗಿನವನೆಂಬುದರಿಂದಲ್ಲವೇ ತನ್ನ ಸ್ವಾರ್ಥವನ್ನು ಬಿಡಬೇಕು ?

**ನುರುಲ್ಲ.**—ರಾಜಸೇವಕರ ಸಂಬಂಧದ ಅರ್ಥವೇ ಅದು.

**ಅಜೀಮ.**—ಆಗಿರಬಹುದು. ಎಂತಹ ನಿಷ್ಠುರ ಸತ್ಯವಿದು!

**ನುರುಲ್ಲ.**—ರಾಜಾಜ್ಞೆಗೆ ಉತ್ತರವೇನು ?

**ಅಜೀಮ.**—ಬೇರಾವ ಉತ್ತರ ? ಒಮ್ಮೆ ದಾಸ್ಯವನ್ನು ಕುರಿತು ಗಾಢವಾಗಿ ಚಿಂತಿಸಿ ಕಣ್ಣೀರು ಸುರಿಸುವುದು. ಮತ್ತೆ 'ಬುದ್ಧಿ! ಅಪ್ಪಣೆಯಾದಂತೆ!' ಎನ್ನುವುದು.

**ನುರುಲ್ಲ.**—ಇದಕ್ಕಾಗಿ ವ್ಯಸನವೇಕೆ, ಅಜೀಮ್? ಮಾನವ ಸ್ವಭಾವವೇ ಹೀಗೆ.

**ಅಜೀಮ.**—ಹೌದು; ಸ್ವಭಾವ ಹೀಗೆ. ಅನುರಾಗಿಗಳ ಸ್ವಭಾವ ಹೇಗೆ ?

**ನುರುಲ್ಲ.**—ಅದೇನು ಆ ಹುಡುಗಿಯೊಬ್ಬಳ ಮೇಲೆಯೇ ನಿಮ್ಮ ಪ್ರೇಮ ?

**ಅಜೀಮ.**—ಒಂದು ಮನಸ್ಸು ಒಂದೇ ಕಡೆಯಲ್ಲಿ ನೆಡುವುದು.

**ನುರುಲ್ಲ.**—ಈ ಸ್ತ್ರೀಯಲ್ಲದೆ—ಇನ್ನೊಬ್ಬಳ ಮೇಲೆ ಯಾಕೆ ಅನುರಾಗವುಂಟಾಗಬಾರದು ?

**ಅಜೀಮ.**—ಚಂಚಲತೆಯನ್ನು ಬಿಟ್ಟು ಈ ಸ್ಥಳದಲ್ಲಿಯೇ ಅದು ನೆಟ್ಟಿದೆ. ಆದುದರಿಂದ ಇನ್ನೊಬ್ಬಳನ್ನು ಪ್ರೀತಿಸುವ ಆ ಪ್ರಕರಣವು ಎಂದೋ ಮುಗಿದುಹೋಯಿತು. ಆದರೂ ನನ್ನಂತಹ ಅಲ್ಪರಿಗೆ ಅಂತಹ ಅನರ್ಘ್ಯರತ್ನಗಳು ಹೇಗೆ ದೊರೆತಾವು ?

**ನುರುಲ್ಲ.**—ಬೆಳಗಿನ ನೌಬತ್ತು!

**ಅಜೀಮ.**—ನಿನ್ನೊಡನೆ ಸ್ಪಷ್ಟವಾಗಿ ಹೇಳುತ್ತೇನೆ. ಆ ರಜಪೂತ ಕನ್ಯೆ ನನ್ನವಳು.

**ನುರುಲ್ಲ.**—ಹೇಳಬೇಕಾಗಿಲ್ಲ. ಈ ಮೊದಲೇ ತಿಳಿಯಿತು.

**ಅಜೀಮ.**—ಅವಳು ನನ್ನ ಪಂಜರದ ಅರಗಿಳಿಯೆಂದು ಭಾವಿಸುವುದಕ್ಕೆ ಅಭ್ಯಾಸವಾಗಿದೆ, ನನಗೆ!

**ನುರುಲ್ಲ.**—ಸರಿ.

**ಅಜೀಮ.**—ನನ್ನ ಕೈಗೊಮ್ಮೆ ಸಿಕ್ಕಿದ್ದಿತು; ಮತ್ತೆ ಹಾರಿ ಹೋಯಿತು.

**ನುರುಲ್ಲ.**—ಅದು ಯಾವಾಗ ?

**ಅಜೀಮ.**—ಎಲ್ಲವನ್ನೂ ವಿಸ್ತಾರವಾಗಿ ಹೇಳುತ್ತೇನೆ. ಒಮ್ಮೆ ನಾನು ಆಹೋರಿನ ಸಮೀಪದ ಉಪವನದಲ್ಲಿ ತಿರುಗಾಡುತ್ತಿದ್ದೆ. ರಿಪುಕ್ಷೇತ್ರವಾದುದರಿಂದ ವೇಷಪಲ್ಲಟವನ್ನು ಮಾಡಿಕೊಂಡಿದ್ದೆನು. ರಜಪೂತನಿಗಿರುವಂತೆ ಉದ್ದವಾದ ಗಡ್ಡವಿತ್ತು; ಪಗದಿಯಿತ್ತು. ಭವ್ಯವಾದ ಅರಬಿ ಕುದುರೆಯನ್ನೇರಿ ಸಂಚರಿಸುತ್ತಿದ್ದಾಗ ಆಕಸ್ಮಿಕವಾಗಿ ದೂರದಿಂದ ಒಂದು ಕೂಗು ಕೇಳಿಸಿತು. ನನ್ನ ಕುದುರೆಯು ಚಂಡಮಾರುತನ ವೇಗದಿಂದ ಅಲ್ಲಿಗೆ ಓಡಿದುದೇ ತಡ; ಯಾವಳೋ ಒಬ್ಬ ಹುಡುಗಿಯನ್ನು ಸುತ್ತಿಕೊಂಡಿದ್ದ ಪಠಾಣರು ಹುಡುಗಿಯ ರಕ್ಷಕರು ಬಂದರೆಂಬ ಭಯದಿಂದ ಪಲಾಯನ ಮಾಡಿದರು. ಅಷ್ಟರಲ್ಲಿ ರಜಪೂತನೊಬ್ಬನು ಆ ಕಡೆಗೆ ಓಡಿ

ಬಂದ. ನಾವು ಮಾತಾಡಲಿಲ್ಲ. ನಮ್ಮ ಖಡ್ಗಗಳು ಮಾತಾಡಿದುವು. ನಾನು ಸ್ಮೃತಿ ತಪ್ಪಿ ಹೋರಾಡಿದೆ. ಖಡ್ಗವು ಆತನ ತಲೆಯನ್ನು ಚೆಂಡಾಡುತ್ತಿದ್ದಿತು. ಅಷ್ಟರಲ್ಲಿ ಬೊಬ್ಬೆಯನ್ನು ಕೇಳಿ ಯಾರೋ ರಜಪೂತ ಸೈನಿಕರು ಆತನ ಸಹಾಯಕ್ಕೆ ಬಂದರು. ನನ್ನ ವಿಷಮಸ್ಥಿತಿ ಚೆನ್ನಾಗಿ ತಿಳಿದುಬಂತು. ಕುದುರೆಯ ಕಡಿವಾಣವನ್ನು ಇನ್ನೊಂದೆಡೆಗೆಳೆದು ಅವಿರಳವೃಕ್ಷರಾಜಿಯಲ್ಲಿ ಮರೆಯಾದೆ. ನುರುಲ್ಲ! ಹೇಳುವುದೇನು ? ಮರವನ್ನು ಅಲುಗಾಡಿಸಿದೆ, ಹಣ್ಣು ಬಿತ್ತು; ಆದರೆ ನನ್ನ ಕೈಗಲ್ಲ ನೋಡು.

**ನುರುಲ್ಲ.**—ಹುಂ; ಆ ಹಣ್ಣು ನಾಳೆ ಯಾರಿಗಾಗುವುದೋ ನೋಡೋಣ.

**ಅಜೀಮ.**—ನನ್ನ ಮನಸ್ಸು ಆಕೆಯ ಚಿತ್ರವನ್ನು ತನ್ನ ಬಳಿಯಲ್ಲೇ ಕೂರಿಸುವುದು; ಆಲಿಂಗಿಸುವುದು; ಮುತ್ತಿಡುವುದು. ಆಕೆಯ ಹೆಸರನ್ನು ಕೇಳಿದೊಡನೆ ನಾಡಿಯಲ್ಲಿ ಪ್ರಸರಿಸುವ ರಕ್ತಬಿಂದುಗಳು ಆನಂದಾತಿರೇಕದಿಂದ ಧುಮುಗುಟ್ಟಿ ಹಾರುತ್ತವೆ. ಏನು ಮಾಡೋಣ!

[ಅಷ್ಟರಲ್ಲಿ ಭೇರೀನಾದ].

**ನುರುಲ್ಲ.**—ಹಾಗಾದರೆ ಸುಲ್ತಾನನ ಗತಿಯೇನು ?

**ಅಜೀಮ.**—ಪ್ರಯಾಣಕ್ಕೆ ನಾನೂ ಸಿದ್ಧನೆ. ಸೈನಿಕರಿಗೆ ಆಜ್ಞೆ ಹೋಗಿದೆ. ನನ್ನ ಕೈ ಸನ್ನೆಯಾದರೆ ಸಾಕು ; ೧೦ ಸಾವಿರ ಯೋಧರು ಖಡ್ಗ ಹಿರಿದು ನಿಲ್ಲುವರು. ರಜಪೂತರು ಒಪ್ಪದಿದ್ದರೆ, ಅವರ ಹೆಸರಿಲ್ಲದಂತೆ ಮಾಡುವರು. ಆದರೆ ಫಲಪ್ರಾಪ್ತಿಯ ಅಧಿಕಾರದ ವಿಷಯದಲ್ಲಿ ಮಾತ್ರ ಶಹನಿಗೂ ನನಗೂ ಮತಬೇದ.

**ನುರುಲ್ಲ.**—ಮುಂದಣ ವಿಷಯದ ಗೊಡವೆ ನಮಗೇಕೆ ? ಸದ್ಯದ ಕರ್ತವ್ಯವನ್ನು ಮಾಡೋಣ.

**ಅಜೀಮ.**—ವ್ಯಸನಾಸ್ಪದವೆಂದರೆ ಅಹಮ್ಮದ್ ಶಹನು ನನ್ನಿಂದ ವಂಚಿತನಾಗುತ್ತಾನೆಂಬುದು. ನನ್ನ ಕೈಯಿಂದ ಅಮೃತಾನ್ನವನ್ನು ತನ್ನ ಬಾಯಿಗೆ ಹಾಕಿಸಿಕೊಳ್ಳಬೇಕೆಂದು ಅವನಾಸೆ. ನನ್ನ ಕೈದುತ್ತು ನನ್ನ ಬಾಯಿಗೆ ಬೀಳಬೇಕೆಂದು ನನ್ನ ಆಗ್ರಹ. ನುರುಲ್ಲ! ನಿನ್ನಲ್ಲಿ ಎಲ್ಲವನ್ನು ಬಿಚ್ಚಿಹೇಳುತ್ತೇನೆ. ಇದನ್ನು ಸುಲ್ತಾನನಿಗೆ ಬೇಕಾದರೆ ತಿಳಿದು

ಇದ್ದುದನ್ನು ಇದ್ದಂತೆ ಹೇಳು. ಉದ್ದೇಶಸಿದ್ಧಿಗಾಗಿ ಎಂತಹ ಕಷ್ಟಗಳನ್ನು ಇದಿರಿಸುವುದಕ್ಕೂ ಸಿದ್ಧನು ನಾನು. ಉದ್ದೇಶವು ನನ್ನ ಹಿತಸಿದ್ಧಿಯನ್ನು ಕೊಡುವುದಿದ್ದರೆ ಮಾತ್ರ. ಇಲ್ಲವಾದರೆ ಈ ಕಷ್ಟವು ಯಾರಿಗೆ ಬೇಕು ನುರುಲ್ಲ? ಒಂದು ದಿನವೂ ಸುಖ ನಿದ್ರೆಯಿಲ್ಲ; ಸುಖ ಭೋಜನವಿಲ್ಲ. ದಿನಂಪ್ರತಿ ಯುದ್ಧ, ಯುದ್ಧವನ್ನು ಸ್ಮರಿಸಿಕೊಂಡೇ ನಿದ್ರೆ! ಶಸ್ತ್ರಗಳ ಠಣತ್ಕಾರವೇ ನಮಗೆ ಉದಯರಾಗ. ಹಾಳಾಯಿತು ಈ ನಮ್ಮ ಜೀವನ. ಇದು ವರೆಗೆ ಏನೆಲ್ಲಾ ಆಗಿಹೋಯಿತು. ಇನ್ನು ಮುಂದೆ ಏನಾಗುವುದೋ ಹೋಗುವುದೋ ನನಗೆ ತಿಳಿಯಲೇ ಬೇಕು. ತಿಳಿದೇ ಖಡ್ಗಕ್ಕೆ ಕೈ ಹಾಕಬೇಕು.

[ಅಷ್ಟರಲ್ಲಿ ಸೇನೆಯ ಕವಾಯತ್ತಿನ ಶಬ್ದ].

**ನುರುಲ್ಲ.**— ಈಗ ಸೇನಾಸಂಗ್ರಹವನ್ನು ಮಾಡಲು ಅಡ್ಡಿಯೇನು?

**ಅಜೀಮು.**— ಅಡ್ಡಿಯೇನೂ ಇಲ್ಲ. ಹೋಗೋಣ!

[ಏಳು ಮಂದಿ ಸಿಪಾಯಿಗಳು ಬಂದು ಸಮಸ್ಕಾರ ಮಾಡುವರು. ಅವರ ವೈಗಾವಲಿ ನೊಡನೆ ಇಬ್ಬರೂ ತೆರಳುತ್ತಾರೆ].

## ದೃಶ್ಯ ೩

[ಸುಲ್ತಾನನ ಓಲಗಕ್ಕೆ ಹೋಗುವ ದಾರಿ. ಮಧುಸೂದನನು ಅವಸರದಿಂದ ಓಡುತ್ತಿದ್ದಾನೆ. ಇದಿರಾಗಿ ಬೀಬಿ. ಮಧುಸೂದನನು ಅವಳನ್ನು ನೋಡದಂತೆ ನಟಿಸಿ ಮುಂದುವರಿಯುತ್ತಾನೆ. ಅವಳು ಅಡ್ಡಗಟ್ಟುತ್ತಾಳೆ.]

**ಮಧುಸೂದನ.**—ಸಂಪತ್ತು ಬಂದರೂ ಏನು ಗ್ರಹಚಾರಕಷ್ಟವಿದು? ಈ ಬೀಬಿಯನ್ನು ಎಲ್ಲೆಲ್ಲಿಯೂ ನೋಡಬೇಕೆಂಬ ನಿಯಮವನ್ನು ನನ್ನ ಮೇಲೆ ಹೊರಿಸಿದ ಗ್ರಹವು ಯಾವುದು? ಯಾವ ದಾರಿಯಲ್ಲಿ ಹೋದರೂ ಈ ಬೀಬಿ, ಈ ಕರಿ ಬೆಕ್ಕು ಅಡ್ಡ ಬರುತ್ತದೆ. ಆಹ್ನಿಕಕ್ಕಾಗಿ ನದೀತೀರಕ್ಕೆ ಹೋದರೆ, ಗೂಗೆಯಂತೆ ಮುಸುಕು ಹಾಕಿಕೊಂಡ ಬೀಬಿ. ಸಂಜೆಯ ವಿಹಾರಕ್ಕಾಗಿ ಉಪವನಕ್ಕೆ ಹೋದರೆ, ಅಲ್ಲಿಯೂ ಈ ಪ್ರೇತ. ಏನು ಮಾಡಲಿ? ಎಲ್ಲಿಗೆ ಹೋಗಲಿ? ಬೀಬಿಯಿಲ್ಲದ ರಾಜ್ಯವು ಈ ಬ್ರಹ್ಮಸೃಷ್ಟಿಯಲ್ಲಿ ಒಂದೂ ಇಲ್ಲ! ಯೌವನದಲ್ಲಿ ಮಾಡಿದ ಮೋಜಿನ ಪ್ರಾಯಶ್ಚಿತ್ತವಿದು. [ಎಂದು ಹಜ್ಜೆಯ ವೇಗವನ್ನು ಹೆಚ್ಚಿಸುವನು].

**ಬೀಬಿ** (ಆತ್ಮಗತ).—ಈ ಬ್ರಾಹ್ಮಣನು ಈಗ ನನ್ನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಬಡವನಾಗಿದ್ದಾಗ ಬೀಬಿ ಬೇಕು. ಧನಿಕತ್ವವು ಕಣ್ಣ ಮುಂದಿರುವಾಗ ಬೇಡ. (ಪ್ರಕಾಶವಾಗಿ) ಮಿತ್ರರೇ, ಸ್ವಲ್ಪ ತಡೆಯಿರಿ! (ಮಿಶ್ರನು ಕೇಳದಂತೆ ನಟಿಸಿ ಮುಂದೆ ಸಾಗುವನು) ಮಧುಸೂದನ ಮಿಶ್ರರೇ! ಒಂದೇ ಮಾತು. (ಮತ್ತೂ ಮಿಶ್ರನು ಮುಂದುವರಿಯುವನು) . . . ಹಿಂದಿನದೆಲ್ಲವೂ ಮರೆಯಿತೇ, ಪ್ರಿಯ ?

**ಮಧು** (ಆತ್ಮಗತ).—ಹಿಂದಿನದೆಲ್ಲಾ ಮರೆಯಲಿಲ್ಲ. ಮರೆತಿದ್ದರೆ ಎಷ್ಟು ಚೆನ್ನಾಗುತ್ತಿದ್ದಿತು! ಹಾಗಿಲ್ಲವಾದ ಕಾರಣವೇ 'ಪ್ರಿಯ' ಎಂದು ಸಂಬೋಧಿಸಿದೊಡನೆ ಎದೆ ಕರಗುತ್ತದೆ. 'ಮಿತ್ರ' ಎಂದು ಕರೆದಳು. ಕೇಳದಂತೆ ನಟಿಸಿ ಮುಂದೆ ಸರಿದೆ. 'ಮಧುಸೂದನ!' ಎಂದು ಸಂಬೋಧಿಸಿದಳು. ಮಧುಸೂದನನ ಪಾವನಸ್ಮರಣೆ ಮಾಡುತ್ತಾ ಹೋದೆ. 'ಪ್ರಿಯ!' ಎಂದು ಕರೆದಳು. ಎಲ್ಲವೂ ಮರೆತುಹೋಯಿತೇ ? ಎಂದಳು. ಮರವೆಯ ಪೆಟ್ಟಿಗೆಯ ಬಾಗಿಲು ತೆರೆದು ಸ್ಮರಣಗಳನ್ನು, ಆ ಅಮೃತ ಸ್ಮರಣಗಳನ್ನು ಹೊರತೆಗೆದಳು. ಇನ್ನು ಮಾಡುವುದೇನು ? ನಿಂತು

ಬಿಡುತ್ತೇನೆ. ಓಡಿಸಿಕೊಂಡು ಬರುವ ರಾಜಭಟರ ಮುಂದೆ ಕಳ್ಳನು ನಿಲ್ಲು ವಂತೆ ನಿಂತು ಬಿಡುತ್ತೇನೆ. (ನಿಲ್ಲುವನು).

**ಬೀಬಿ** (ಸಮೀಪಕ್ಕೆ ಬಂದು ಕಣ್ಣೀರು ಸುರಿಸಿ ಆತನ ಕೈಹಿಡಿದು).—ಏನು ಪ್ರಿಯ! ಈಗ ನೆನಪೇ ಇಲ್ಲ ತಮಗೆ.

**ಮಧು.**—ನೆನಪಿಲ್ಲದಿರುವುದೇ, ಬೀಬಿ? ನೀನಿರುವ ವರೆಗೆ ನಾನಿ ರುವ ತನಕ ನೆನಪಿನಂತೆಯೇ ಇರುವುದು.

**ಬೀಬಿ.**—ಈಗ ನನ್ನ ಮನೆಗೆ ಸವಾರಿ ಬರುವುದು ಅಪರೂಪ.

**ಮಧು.**—ಏನು ಸವಾರಿಯೋ! ಅದು ಒಮ್ಮೊಮ್ಮೆಯೂ ಬರುವುದು ಕಷ್ಟವಾಗಿದೆ. ದಿನಕ್ಕೆ ಹತ್ತು ಸಲ ಅರಮನೆಗೆ ಹೋಗುತ್ತದೆ...

**ಬೀಬಿ.**—ಪ್ರೀತಿಯನ್ನು ಮರೆಯಿಸುವ ಅರಮನೆ ಎಂತಹದು?

**ಮಧು.**—ರಾಜಕಾರ್ಯ, ಎಂದರೆ, ಹಾಗೆಯೇ ಬೀಬಿ!

**ಬೀಬಿ.**—ಆಹೋರಿನಿಂದ ಬಂದ ಮೇಲೆ ಯಾವ ರಾಜಕಾರ್ಯವೂ ಇರಲಿಲ್ಲ. ಉಣ್ಣುವುದು, ತಿನ್ನುವುದು, ಕುಡಿಯುವುದು, ಕುಣಿಯುವುದು.

**ಮಧು.**—ರಾಜಕಾರ್ಯದ ವಿಚಾರ ನಿನಗೇನು ಗೊತ್ತು, ಬೀಬಿ?

**ಬೀಬಿ.**—ಹುಂ.

**ಮಧು.**—ಈಗಿನ ಮಿತ್ರನು ಮೊದಲಿನಂತಲ್ಲ. ಈಗಿನ ಮಿತ್ರನು ಉಣ್ಣುವುದು ತಿನ್ನುವುದು ಎಲ್ಲ ರಾಜಕಾರ್ಯ.

**ಬೀಬಿ.**—ನನ್ನ ಮನೆಗೆ ಬರಲಾಗದೆಂದು ರಾಜಾಜ್ಞೆಯಾಗಿದೆಯೋ?

**ಮಧು.**—ಹಾಗೇನೂ ಇಲ್ಲ. ಆದರೂ ಸೇವಕರು ಅಪವಾದಕ್ಕೆ ಹೆದರಬೇಕಲ್ಲವೇ?

**ಬೀಬಿ.**—ಓಹೋ, ಇದೂ ಅಪವಾದ! ಮೊದಲು ಇದರ ಗೊಡವೆ ಯಿಲ್ಲ.

**ಮಧು.**—ನಿನಗೊಂದೂ ತಿಳಿಯದು, ಬೀಬಿ. ಬಡಜನರು ಇಂತಹ ಕೆಲಸ ಮಾಡುವುದಕ್ಕೂ ನಮ್ಮಂತಹ ಮಹಾಪುರುಷರು ವರ್ತಿಸುವುದಕ್ಕೂ ವ್ಯತ್ಯಾಸವಿದೆ.

**ಬೀಬಿ.**—ಏನದು?

**ಮಧು.**—ನಮ್ಮಂಥವರು ಸೇವಾಸ್ತ್ರೀಯರ ಮನೆಗೆ ದರ್ಶನ ಕೊಡ ಬಾರದೆಂದಿಲ್ಲ.

**ಬೀಬಿ.**—ಹಾಗಾದರೆ ಏಕೆ ಬರುವುದಿಲ್ಲ ?

**ಮಧು.**—ಗುಟ್ಟಾಗಿ ಬರಬೇಕು, ಬೀಬಿ. ದೊಡ್ಡವನಾಗಿ ಬದುಕ ಬೇಕಾದರೆ, ಇಂತಹ ವಿಷಯಗಳಲ್ಲಿ ರಹಸ್ಯವಿರಬೇಕು.

**ಬೀಬಿ.**—ಹಾ! ನಿಮ್ಮ ದೊಡ್ಡತನವೆ!

**ಮಧು.**—ನಿನಗೇನು ಗೊತ್ತು ಈ ಪ್ರಪಂಚದ ವ್ಯವಹಾರ? ವ್ಯಸನ ಪಡಬೇಡ, ಬೀಬಿ. ನಿನ್ನನ್ನು ಬಿಡುವಂತಿಲ್ಲ ನಾನು.

**ಬೀಬಿ.**—ಇಂದು ರಹಸ್ಯವಾಗಿ ಬರಬೇಕು; ನಾಳೆ ಬರಲೇ ಬಾರ ದೆಂದು ನಿಮ್ಮ ದೊಡ್ಡತನವು ಕಲಿಸಿದರೆ ?

**ಮಧು.**—ಹಾಗೆಂದೂ ಆಗುವುದಿಲ್ಲ; ನಂಬು ನನ್ನನ್ನು.

**ಬೀಬಿ.**—ನಿಮಗೆ ರಾಜಸೇವೆಯಿಂದ ದೊಡ್ಡ ಜಹಗೀರು ಸಿಕ್ಕು ವುದು. ಆಗ ರಾಜ್ಯತಂತ್ರಗಳು ಮತ್ತಷ್ಟು ಹೆಚ್ಚುವುವಲ್ಲವೆ ? (ಗದ್ಗದಕಂಠ) ಲೋಕದಲ್ಲಿ ಏನೇ ಆಗಲಿ; ಬೀಬಿಯನ್ನು ಮರೆಯದಿರಿ. (ಎಂದು ಕೈಯೆತ್ತಿ ಮುಂದೆ ಬರುವಳು).

**ಮಧು** (ಅವಳ ಕೈಯನ್ನು ಹಿಡಿದು).—ನಿನ್ನನ್ನು ಹೇಗೆ ಮರೆಯಲಿ, ಪ್ರಾಣೇಶ್ವರಿ ? ದಿನಂಪ್ರತಿ ಕೆಲಸ. ಜೀವಕ್ಕೆ ಬೇಸರ ಹಿಡಿಯುವ ಕೆಲಸ. ಒಮ್ಮೊಮ್ಮೆಯಾದರೂ ಬೇಸರ ಹೋಗುವುದು ಹೇಗೆ ನಿನ್ನನ್ನು ಮರೆತರೆ ?

**ಬೀಬಿ.**—ಆಗ ಬೇಸರ ಕಳೆಯಲು ಬೇರೆಷ್ಟೋ ಬೀಬಿಯರು ದೊರೆ ಯುವುದಿಲ್ಲವೇ ?

**ಮಧು.**—ಛೆ! ಹಾಗೆಲ್ಲ ಹೇಳಬಾರದು. ಎಷ್ಟೋ ಮಂದಿ ವಿಲಾಸಿನಿ ಯರು ಒನಪು ಒಯ್ಯಾರಗಳನ್ನು ಬೀರುತ್ತಾ ಮಿತ್ರನ ಮುಂದೆ ನಿಲ್ಲಬಹುದು. ಆದರೆ ನಿನ್ನ ಹೃದಯವಿದ್ದೀತೇ ಅವರಿಗೆ ?

**ಬೀಬಿ.**—ಯಾಕೆ ಇರಬಾರದು ?

**ಮಧು.**—ಹೃದಯುವಿದ್ದರೂ ಈ ಕಣ್ಣೀರು! ಈ ನಗೆ! ಈ ಮುನಿಸು! ಈ ಸಂತೋಷ! ಇವೆಲ್ಲವನ್ನೂ ನೋಡಬೇಕಾದರೆ ಈ ಬೀಬಿಯೇ ಬೇಕು.

**ಬೀಬಿ.**—ಹಾಗಾದರೆ ನನ್ನ ನೆನಪುಂಟು.

**ಮಧು.**—ಇಂತಹ ಮಾತುಗಳೇಕೆ, ಬೀಬಿ? ನನ್ನ ಪ್ರೇಮವು ಸಮುದ್ರದಷ್ಟು ವಿಶಾಲ. ಉಕ್ಕೇರುವ ಸಮಯದಲ್ಲಿ ಒಂದೇ ಸವನೆ ಉಕ್ಕುವುದು. ಇಳಿದರೆ ಒಂದೆ ಸವನೆ ಇಳಿಯುವುದು. ಆದರೆ ಇದು ಅವಸ್ಥಾಭೇದವಲ್ಲದೆ ಪ್ರೇಮದ ಅಭಾವ ಎಂದಾಗುವುದೇ?

**ಬೀಬಿ.**—ಹುಂ. ಸುಲ್ತಾನನಿಂದ ಬಹುಮಾನ ಕೇಳುವಾಗ ನನ್ನನ್ನು ಅಂತಃಪುರದ ಸೇವೆಯಿಂದ ಬಿಡುಗಡೆಮಾಡಬೇಕೆಂದು ಕೇಳಬೇಕು; ತಿಳಿಯಿತೇ?

**ಮಧು** (ಆತ್ಮಗತ).—ಓಹೋ! ದೀರ್ಘಾಲೋಚನೆಯಿದು. ಮತ್ತೆ ಮಧುಸೂದನನ ಕೈಹಿಡಿದು ಜೀವಹಿಂಡಬಹುದೆಂದು! (ಪ್ರಕಾಶ) ಅದನ್ನು ನೀನು ಹೇಳಬೇಕೇ?

**ಬೀಬಿ.**—ನೀವು ರಾಜಾಸ್ಥಾನಕ್ಕೆ ನಡೆಯಿರಿ. ತಡವಾಯಿತು. ಸೇನಾಪತಿ ಅಜೀಮ್‌ಖಾನರೂ ಅವರ ಪ್ರಧಾನಾಧಿಕಾರಿಗಳೂ ಆಗಲೇ ಒಡ್ಡೋಲಗಕ್ಕೆ ಹೋಗಿದ್ದರು. ಜಯಶಾಲಿಗಳಾಗಿ ಹಿಂದೆ **ಬನ್ನಿರಿ.** ಮತ್ತೆ (ಎಂದು ಲಜ್ಜೆಯನ್ನು ನಟಿಸುವಳು).

**ಮಧು.**—ಅಭಿಪ್ರಾಯವಾಯಿತು, ಬೀಬಿ! ಹೋಗು ನೀನು. (ಬೀಬಿ ಹೋಗುವಳು). ಪಾಪ, ಇವಳೆಷ್ಟು ಮುಗುದೆ! ಒಂದು ಮಾತಿಗೆ ಹತ್ತು ಸಲ 'ಬೀಬಿ' ಎಂದು ಕರೆದನು. ನನ್ನನ್ನು ನಂಬಿದಳು. ಹೆಂಗುಸರನ್ನು ವಂಚಿಸುವುದೇನು ಘನವಿದ್ಯೆಯೇ? (ಗಹಗಹಿಸಿ ನಗುತ್ತಾ) ನಂಬು, ಬೀಬಿ! ನಂಬು. ಮಧುಸೂದನನ್ನು ನಂಬು. ಸಾಯುವ ವರೆಗೆ ನಂಬು, ತಿಳಿಯಿತೇ?

[ತೆರಳುವನು].

## ದೃಶ್ಯ ೪

[ಓಲಗಸಾಲೆ; ಶಹನು ರತ್ನಖಚಿತ ಸಿಂಹಾಸನದ ಮೇಲೆ ಕುಳಿತಿರುವನು; ಎಡಬಲದಲ್ಲಿ ಚಾಮರಹಸ್ತೆಯರಾದ ಪಾರಸೀಕಸ್ತ್ರೀಯರು. ಇದಿರಲ್ಲಿ ವಾರ ನಾರಿಯರ ನೃತ್ತ. ಆಗಾಗ ಪಾನಪಾತ್ರವು ಬರುತ್ತಲೇ ಇದೆ. ಸಮ್ಮುಖದಲ್ಲಿ ಮಂತ್ರಿಗಳೇ ಮೊದಲಾದ ಪ್ರಮುಖಾಧಿಕಾರಿಗಳು. ನೃತ್ತಾವಸಾನದಲ್ಲಿ].

**ಅಹಮ್ಮದ್ ಶಹ.**—ಎಲ್ಲಾ ವ್ಯಸನ ತೊಳೆದು ಹೋದಂತಾಯಿತು. ಬೇಸರವೆಲ್ಲಾ ತೇಲಿ ಹೋಯಿತು. ಜೀವಕ್ಕೆ ಹಿಡಿದ ಕಲ್ಮಷಗಳನ್ನು ತೊಳೆದು ಶುಚಿ ಮಾಡಲು ಅಲ್ಲನು ಎರಡೇ ವಸ್ತುಗಳನ್ನು ಸೃಷ್ಟಿಸಿದ್ದಾನೆ. ಒಂದನೆಯದು ಸಂಗೀತ, ಎರಡನೆಯದು ಮದಿರೆ! ಇವೆರಡರಲ್ಲಿ ಯಾವುದು ಮೇಲು ಎನ್ನಲಾಗುವುದಿಲ್ಲ. ಎಲ್ಲಿ? ಬರಲಿ [ಒಬ್ಬಳು ದಾಸಿ ಪಾನಪಾತ್ರವನ್ನು ತಂದು ಕೊಡುವಳು. ಅದು ಬರಿದಾದ ಮೇಲೆ] ಸಂಗೀತವೋ! ಅದರಲ್ಲಿಯೂ ಇಂತಹ ಸ್ವರ್ಗೀಯ ಗುಣಗಳಿವೆ. ಅದರ ಧಾರೆ ಎದೆಯ ಪ್ರತಿಯೊಂದು ಭಾವನೆಗೂ ನಾಟುತ್ತದೆ. ಅದರ ತೆರೆ ಪ್ರತಿಯೊಂದು ಕಂದರದಲ್ಲಿಯೂ ಪ್ರತಿಧ್ವನಿಸುತ್ತದೆ. ಅದರ ಜ್ವಾಲೆ ಪ್ರಾಪಂಚಿಕ ವಿಚಾರಗಳನ್ನು ಸುಟ್ಟು ಭಸ್ಮಮಾಡುತ್ತದೆ. ಅನುರಾಗದ ಅಂಕುರಕ್ಕೆ ನೀರು ಹೊಯ್ಯುತ್ತದೆ. ಇನ್ನೊಂದು ತಟ್ಟೆ. (ಅದನ್ನೂ ಕುಡಿದು). ಇದರ ಸೇವನೆಯಿಂದಲೇ ಮುಪ್ಪನ್ನು ಜಯಿಸಿದ್ದೇನೆ. ವಯಸ್ಸೋ? ಅದು ಒಂದು, ಎರಡು ಮೂರೆಂದು ಆರುವತ್ತರ ವರೆಗೆ ಲೆಕ್ಕ ಹೇಳಿತು. ಆದರೂ ನನ್ನ ಮನಸ್ಸು ಇನ್ನೂ ಯೌವನವನ್ನು ದಾಟಲಿಲ್ಲ. ಈ ಒಂದು ಬಟ್ಟಲು ಅಜರಾಮರತ್ವವನ್ನು ಕೊಡುವುದಿಲ್ಲವೇ? ಇಲ್ಲದಿದ್ದರೆ ಯಾಕೆ ನನ್ನ ಜೀವನಕ್ಕೆ ಇನ್ನೂ ಸಂಧ್ಯಾಕಾಲ ಬರಲಿಲ್ಲ? ಮಂಜು ಮುಸುಕಿದ ಪ್ರಾತಃಕಾಲವೇ ಈಗಲೂ. ಎಲೆ ಸಂಗೀತವೇ! ಮದಿರೆಯೇ! ನೀವಿಬ್ಬರೂ ಅಣ್ಣ ತಂಗಿಯರೊ? ಗಂಡ ಹೆಂಡಿರೊ? [ಸಭಾಸದರ ಕಡೆಗೆ ತಿರುಗಿ]. ಏನೋ ಹೇಳಿದೆ. ನನ್ನ ಹೃದಯವು ಅತಿ ವಿಶಾಲವಾಗಿ ನಿಮ್ಮ ಹೃದಯದಲ್ಲಿ ಬೆರೆತು ಹೋಯಿತು. ಆದಕಾರಣ ಅಂತರಂಗ ವಿಚಾರವನ್ನು ಬಹಿರಂಗವಾಗಿ ಹೇಳಿದೆ. ಆಗಲಿ; ಇಂದಿನ ವಿಷಯವೇನು? ಮರೆತು ಹೋಯಿತು.

**ಮಿಶ್ರ.**—ಆಹೋರಿನ ಪ್ರಯಾಣ ವಿಚಾರ.

**ಶಹ.**—ಹೌದು; ಹಾಗೆಯೇ ಸರಿ. ಅಜೀಮ್ ಖಾನ್!

**ಅಜೀಮ.**—ಏನು ಖಾವಂದ?

**ಶಹ.**—ನಿನ್ನ ಖಡ್ಗದ ಧಾರೆಗೆ ಮಣ್ಣು ಹಿಡಿದಿರ ಬಹುದಲ್ಲವೇ?

**ಅಜೀಮ.**—ಅದಕ್ಕೆ ಮಣ್ಣು ಹಿಡಿಯುವುದೇ ಇಲ್ಲ.

**ಶಹ.**—ಯಾರು ಸುರುಲ್ಲ! ನಮ್ಮ ಬ್ರಾಹ್ಮಣನಿಗೆ ಇಂದು ೧೦ ಸಾವಿರ ನಾಣ್ಯಗಳು.

**ಮಿಶ್ರ.** ನನಗೆ ಹಣ ಬೇಡ ಖಾವಂದ!

**ಶಹ.**—ಹಾಗೆಂದರೇನು? ಸುಂದರಿಯಾದ ಹೌರಿಯುನ್ನು ಸಂಭ್ರಮ ದಿಂದ ಬರಮಾಡಿಸುವ ನಿನಗೆ ಏನಾದರೊಂದು—

**ಮಿಶ್ರ.**—ನನ್ನ ಜಾತಕ ಹೇಳುತ್ತದೆ, ಖಾವಂದರೆ, ಕೈಯಲ್ಲಿ ಹಣ ಇಟ್ಟುಕೊಳ್ಳುವವನಲ್ಲವೆಂದು.

**ಶಹ.**—ನಿನ್ನ ಜಾತಕ ಆಸ್ತಿಯುನ್ನಿಟ್ಟುಕೊಂಡೀತೋ ಇಲ್ಲವೋ?

**ಮಿಶ್ರ.**—ಅದಕ್ಕೆ ಬೇಕಾದುದೇ ಅದು.

**ಶಹ** (ಗಡ್ಡವನ್ನು ಸವರುತ್ತಾ).—ವರ್ಷಕ್ಕೆ ಎರಡು ಸಾವಿರ ವರಮಾನದ ಉಂಬಳಿ ನಿನಗೆ. ಇದಕ್ಕೆ ನಿನ್ನ ಜಾತಕ ಏನೆನ್ನುತ್ತದೆ?

**ಮಿಶ್ರ.**—'ತಥಾಸ್ತು' ಎನ್ನುತ್ತದೆ.

**ಶಹ.**—ಹುಡುಗಿ ಕೈಗಾದ ಮೇಲೆ ೧೦ ಸಾವಿರ ನಾಣ್ಯ. ಇದಕ್ಕೇನೆನ್ನುತ್ತದೆ?

**ಮಿಶ್ರ.**—ಆಸ್ತಿಯ ಮೇಲೆ ಹಣ ಬಂದರೆ ಅದಕ್ಕೂ ತಥಾಸ್ತು ಎನ್ನುತ್ತದೆ.

**ಶಹ.**—ಅಜೀಮ! ನಿನ್ನ ಭಾಗ್ಯ ಕಣ್ಣ ಮುಂದಿದೆ. ಕೈ ನೀಡುವುದೊಂದೇ ಉಳಿದಿದೆ.

**ಅಜೀಮ.**—ಈಗ ಯಾವ ಭಾಗ್ಯಕ್ಕೆ ಕಡಿಮೆಯಾಗಿದೆ?

**ಶಹ.**—ಹುಂ; ಹಾಗೆಯೇ ಸರಿ. ಆದರೆ ನಮ್ಮ ಇಂದಿನ ರಾಜ ಕಾರ್ಯವೇನು? ಗೊತ್ತಿರಬೇಕು ನಿನಗೆ.

**ಅಜೀಮ.**—ಗೊತ್ತಿಲ್ಲ, ಖಾವಂದರೆ!

**ಶಹ.** — ಹಾಗೆಂದರೇನರ್ಥ ? ರಕ್ತ ಪಿಪಾಸಿತರಾದ ೧೦ ಸಾವಿರ ಯೋದ್ಧರು ಸುಸಜ್ಜಿತರಾಗಿ ನಿಲ್ಲುವಂತೆ ಭೇರಿ ಹೊಡೆ.

**ಅಜೀಮ.** — ಯಾಕೆಂದು ಗೊತ್ತಾಗಲಿಲ್ಲ.

**ಶಹ.** — ನೀನು ಮುಂದಾಗಿ ಅಹೋರಿಗೆ ದಾಳಿಯಿಡು. ಆಗ ಎಲ್ಲವೂ ಗೊತ್ತಾಗುವುದು.

**ಅಜೀಮ.** — ಯುದ್ಧವೇಕೆಂದು ತಿಳಿಯಲಿಲ್ಲ.

**ಶಹ.** — ಮತ್ತೇಕೆ ? ಶಹನಿಗೆ ಹಾಗೆ ಬಯಕೆ ಹುಟ್ಟಿತು !

**ಅಜೀಮ.** — ನಿಷ್ಕಾರಣವಾಗಿ ?

**ಶಹ.** — ಪರ್ವತಸಿಂಹನಿಗೆ ಕನ್ಯಾರತ್ನವಿರುವುದು ಕಾರಣವಲ್ಲವೇ ?

**ಅಜೀಮ.** — ಹುಂ.

**ಶಹ.** — ಈ ವರ್ಷದ ಕಪ್ಪವಾಗಿ ಆರತ್ನವನ್ನು ಕಳುಹಿಸಬೇಕೆಂದು ಆಜ್ಞೆ ಮಾಡಿದ್ದೇನೆ.

**ಅಜೀಮ.** — ಆತನು ಖಾವಂದರ ಸಾಮಂತ ರಾಜ. ಕಪ್ಪವು ತನ್ನಷ್ಟಕ್ಕೆ ಬರುವುದಲ್ಲಾ !

**ಶಹ.** — ನೀನು ಹೇಳಿದುದು ನಿಜ. ಆದರೆ ಪರ್ವತನು ಮೂರು ತಿಂಗಳ ಅವಧಿಯನ್ನು ಕೇಳಿದ್ದಾನೆ.

**ಅಜೀಮ.** — ಹೌದು, ಖಾವಂದ, ಇದು ವರೆಗೆ ತಂದೆಯ ತೊಡೆ ಯನ್ನಗಲದ ಹುಡುಗಿಯನ್ನು ಫಕ್ಕನೆ ಬಿಡಲು ಮನಸ್ಸು ಬರುವುದೇ ?

**ಶಹ** — ಇದೊಂದೇ ಭಾವನೆಯಿಂದ ಅವಧಿಯನ್ನು ಕೇಳಿದುದಾದರೆ, ಸರಿ.

**ಅಜೀಮ.** — ಮತ್ತೆ ?

**ಶಹ.** — ಶುಭಕಾರ್ಯಗಳು ಶೀಘ್ರವಾಗಿ ನೆರವೇರಬೇಕು. ಅವಧಿ ಎಂಬುದು ಅಶುಭ ಚಿಹ್ನ.

**ಅಜೀಮ.** — ಅವರೂ ಮನುಷ್ಯರಲ್ಲವೇ ?

**ಶಹ.**—ಆದುದರಿಂದಲೇ ಅಂಜಿಕೆ ಇಷ್ಟು. ಪುತ್ರೀವಾತ್ಸಲ್ಯ ವೊಂದೆಡೆ, ಕ್ಷತ್ರಿಯರೆಂಬ ಅಭಿಮಾನವೊಂದೆಡೆ. ಇವುಗಳೆರಡು ಹೃದಯ ವನ್ನುತ್ತು ಬಿತ್ತಿ ಯಾವ ಬೆಳಸನ್ನು ಬೆಳೆಯುತ್ತವೋ ತಿಳಿಯದು.

**ಅಜೀಮು.**—ಶಹನ ಆಜ್ಞೆಯನ್ನು ಪಂಚಭೂತಗಳೂ ಮನ್ನಿಸು ವುವು. ಮನ್ನಿಸಬೇಕು.

**ಶಹ.**—ರಜಪೂತರು ಮಾಯಾವಿಗಳು. ಆದುದರಿಂದ ಅವರ ಮಾಯೆಗೆ ಪ್ರತೀಕಾರ ಮಾಡುವುದಕ್ಕಾಗಿ ಈ ಸೈನ್ಯ; ಈ ಸೇನಾಧಿಪತಿ ಅಜೀಮ್‌ಖಾನ್ !

**ಅಜೀಮು.**—ಆಗದುದನ್ನು ಊಹಿಸಿ ಇಷ್ಟೆಲ್ಲಾ ಸನ್ನಾಹ !

**ಶಹ.**—ವಂಚನೆಯಿಲ್ಲದೆ ಪರ್ವತಸಿಂಹನು ಹುಡುಗಿಯನ್ನು ಒಪ್ಪಿಸಿದರೆ, ದಿಬ್ಬಣದೊಡನೆ ಬಂದು ಬಿಡುವೆವು. ಆಗ ನೀವೇ ನಮ್ಮ ಮೈಗಾವಲಿಗೆ ನಿಲ್ಲುವಿರಿ.

**ಅಜೀಮು.**—ಖಾವಂದ! ಅನಿಷ್ಟ ಶಂಕೆಗೆ ಕಾರಣವೇನೂ ಇಲ್ಲ.

**ಶಹ.**—ನನಗೆ ಈ ಬ್ರಾಹ್ಮಣ ಎಲ್ಲವನ್ನೂ ಹೇಳಿದ. ಅಲ್ಲಿ ಕೆಲ ಮಂದಿ ಹಲ್ಲುಬಾರದ ಪೋರರಿದ್ದಾರೆ. ಅವರ ಕಿವಿಗೆ ಇನ್ನೂ ಶಹನ ಕೈ ಹೋಗಲಿಲ್ಲ. ಏನೋ ನಮ್ಮ ವಿಷಯವಾಗಿ ಅಮಂಗಲವನ್ನಾಡುತ್ತಾರಂತೆ.

**ಅಜೀಮು.**—ಪ್ರಾಣದಲ್ಲಿ ಆಸೆಯಿಲ್ಲ.

**ಶಹ.**—ಪ್ರಾಣದಲ್ಲಿ ಆಸೆಯಿಲ್ಲದವರಿಗೆ ರಜಪೂತರಲ್ಲಿ ಮನ್ನಣೆ. ಬೆಂಕಿಯೆಂದು ತಿಳಿದು ತಿಳಿದು ಪತಂಗಗಳಂತೆ ಅದಕ್ಕೆ ಹಾರಬಲ್ಲರು. ಅಂತಹ ಸಂದರ್ಭ ಬಂದರೆ ನಾವು ಹಿಂಜರಿಯಬಾರದು.

**ಅಜೀಮು.**—ಐನೂರು ಮಂದಿ ರಜಪೂತರನ್ನಿದಿರಿಸಲು ಹತ್ತು ಸಾವಿರದ ಸೈನ್ಯವೇ ? ಇದು ನಮ್ಮ ಬಾಹುವಿಕ್ರಮಕ್ಕೆ ಅಪಮಾನವಲ್ಲವೇ ?

**ಶಹ.**—ಮಾನವಾವುದು? ಅಪಮಾನವಾವುದು? ಜಯ ದೊರೆಯ ಬೇಕು. ಅದೇ ಮಾನ ! ಸೈನ್ಯವು ಸಿದ್ಧವಾಗಿದೆಯೋ ?

**ಅಜೀಮು.**—ಹುಂ.

**ಶಹ.**—ಆಹೋರಿನಲ್ಲಿ ನಿನಗೂ ಒಳ್ಳೊಳ್ಳೆಯ ಕೊಳ್ಳೆಗಳು ದೊರೆತಾವು (ಎಂದು ನಗುವನು).

**ಅಜೀಮ** (ಆತ್ಮಗತ).—ಆಹಾ ಈತನ ದೌರಾತ್ಮ್ಯಕ್ಕೆ ಕಣ್ಣು ಮೋರೆಯುಂಟೇ ? (ಪ್ರಕಾಶ) ಆ ವಿಚಾರ ಮತ್ತೆ; ಈಗ ಹೊರಡೋಣ! ಖಾವಂದ.

**ಶಹ.**—ಭಲಾ, ಅಜೀಮ್! ನಿನ್ನ ಶೂರತೆ ಮೊಳಿಕೆಯಲ್ಲಿದ್ದಾಗಲೇ ನನಗೆ ಗೊತ್ತಿದ್ದಿತು. ಸುರುಲ್ಲ! ನೀನು ಹತ್ತೆಂಟು ಆನೆಗಳ ಮೇಲೆ ನಾನಾ ವಿಧದ ವಸ್ತ್ರಾಲಂಕಾರಗಳನ್ನು ಹೇರಿ ಸೇನೆಯ ಹಿಂದೆ ಕಳುಹಿಸು!

**ಸುರುಲ್ಲ.**—ಅಪ್ಪಣೆಯಾದಂತೆ.

**ಶಹ.**—ಮಿಶ್ರ! ನೀನು ನೂರು ಮಂದಿ ಸಿಪಾಯಿಗಳನ್ನು ಕರೆದುಕೊಳ್ಳಬೇಕು. ಕೆಲವು ಪಾಲಕಿಗಳನ್ನು ಹೊರಿಸಿಕೊಳ್ಳಬೇಕು. ಬೇಕಾದಷ್ಟು ದಾಸೀಜನರೊಡನೆ ಹೋಗಬೇಕು.

**ಮಿಶ್ರ.**—ತಥಾಸ್ತು!

**ಶಹ.**—ನಾವು ಹಿಂದಿನಿಂದ ಬರುವೆವು. ಹುಡುಗಿಯನ್ನು ಈ ಮುಪ್ಪಿನ ವೇಷದಿಂದ ಕಾಣುವುದಲ್ಲ. ಎಷ್ಟೆಂದರೂ ಪ್ರಾಯವೇರಿದ ಮೆಟ್ಟಲು ಮುಖದಲ್ಲಿ ಕಾಣುತ್ತಿದೆ. ಅದನ್ನು ಮುಚ್ಚುವುದಕ್ಕೆ ಬೇಕಾದ ಅಲಂಕಾರ ಕ್ರಿಯೆಗಳು ಆಗಬೇಕು. ಹೋಗಿರಿ, ಸೇನಾನಿಗಳೇ! ನಾವು ಸಕಾಲದಲ್ಲಿ ಬರುತ್ತೇವೆ.

[ಎಲ್ಲರೂ ತೆರಳುವರು.]

---

## ದೃಶ್ಯ ೫

[ಒಂದು ಸಣ್ಣ ಗುಡಿಸಲು; ಬೀಬಿಯೂ ಒಬ್ಬಳು ಮುದುಕಿಯೂ ಕುಳಿತಿರುವರು. ಗಾಢಾಂಧಕಾರ. ದೀಪವೊಂದು ಉರಿಯುತ್ತಿದೆ.]

**ಮುದುಕಿ.**—ಯಾರದು ನನ್ನ ಮುಂದೆ? ಬೀಬಿ ಅಲ್ಲವೇ?

**ಬೀಬಿ.**—ಹುಂ.

**ಮುದುಕಿ.**—ಎಲ್ಲವೂ ಕತ್ತಲೆ. ಹಗಲೂ ಕತ್ತಲೆ. ರಾತ್ರಿಯೂ ಕತ್ತಲೆ. ಕಣ್ಣ ಮುಂದೆ ಏನೋ ಒಂದು ಛಾಯೆ ಕಂಡಂತಾಯಿತು. ಬೀಬಿ ಅಲ್ಲವೆ?

**ಬೀಬಿ.**—ಹೌದು ತಾಯಿ!

**ಮುದುಕಿ.**—ಯಾಕೆ, ಮಗಳೆ, ಮಾತಾಡದೆ ಕುಳಿತುದು? ಮಾತಾಡು; ಏನಾದರೂ ಮಾತಾಡು. ಇಡೀ ದಿನ ಬಳಿಯಲ್ಲಿ ಯಾರೂ ಇಲ್ಲ. ನನ್ನ ಕುರುಡು ಮತ್ತು ನಾನು ಅಲ್ಲದೆ ಯಾರೂ ಇಲ್ಲ.

**ಬೀಬಿ.**—ಏನು ಮಾತಾಡಲಿ, ತಾಯಿ?

**ಮುದುಕಿ.**—ಆಡುವುದಕ್ಕೆ ಮಾತಿಲ್ಲವೆಂದರೇನು, ಮಗಳೆ? ರಾತ್ರಿಯ ವೇಳೆ; ಸುತ್ತುಮುತ್ತು ಯಾರೂ ಇಲ್ಲ, ತಂಗಾಳಿಯೊಂದು ಈ ದೀಪದ ನಾಲಗೆಯೊಡನೆ ಆಟವಾಡುತ್ತಿದೆ. ಹೊರಗೆ ಲೋಕದ ಮೇಲೆಲ್ಲ ಮಸಿ ಬಿದ್ದಂತೆ ಕತ್ತಲೆ. ರಾಜನ ಅರಮನೆಯಲ್ಲಿ ಏನೆಲ್ಲಾ ನಡೆಯುತ್ತದೆ? ಹೇಳು, ಮಗಳೆ!

**ಬೀಬಿ** (ನಿಟ್ಟುಸಿರುಬಿಟ್ಟು).—ರಾಜರ ಸುದ್ದಿ ನಮಗೇಕಮ್ಮ?

**ಮುದುಕಿ.**—ಸುದ್ದಿ ಅವರಿಗೆ ಇವರಿಗೆ ಎಂದರೇನು? ಕಿವಿಯಿರುವವರಿಗೆಲ್ಲಾ ಸುದ್ದಿ; ಬಾಯಿಯಿರುವವರಿಗೆಲ್ಲಾ ಸುದ್ದಿ; ನಮಗೆ ಅವೆರಡು ಇಲ್ಲವೇ?

**ಬೀಬಿ.**—ಇದು ಹಾಳು ಜನ್ಮ, ತಾಯಿ! ಹೀಗೆ ಹುಟ್ಟುವುದಕ್ಕಿಂತ ನಾಯಿಯಾಗಿ ಕಾಗೆಯಾಗಿ ಹುಟ್ಟಬಹುದಿತ್ತು.

**ಮುದುಕಿ.**—ಯಾಕೆ, ಮಗಳೆ, ಹೆದರುವುದು? ಆಕಾಶದಲ್ಲಿರುವ ನಕ್ಷತ್ರಗಳೂ ಚಂದ್ರನೂ ಬೀಸುವ ಗಾಳಿಯೂ ಚಾಡಿ ಹೇಳುವುವೇ? ಇಲ್ಲ; ಹೇಳು.

**ಬೀಬಿ.**—ಸ್ತ್ರೀಯಾಗಿ ಹುಟ್ಟಿದ ಮೇಲೆ ಶುಚಿಯಾಗಿರಬೇಕು.

**ಮುದುಕಿ.**—ನಿನಗೆ ಏನಾಗಿದೆ?

**ಬೀಬಿ.**—ಮಿಂಚು ಚಪಲವಾಗಿದ್ದರೂ ಮುಟ್ಟಿದವರನ್ನು ಸುಟ್ಟು ಭಸ್ಮಮಾಡುತ್ತದೆ. ಸ್ತ್ರೀಧರ್ಮವು ಹಾಗಿರಬೇಕು.

**ಮುದುಕಿ.**—ಯಾವಾಗಲೂ ನಿನ್ನ ಮಾತಿನ ಅರ್ಥವಾಗುತ್ತಿತ್ತು. ಇಂದು ಆಗುವುದಿಲ್ಲ.

**ಬೀಬಿ.**—ಎಸೆದು ಬಿಟ್ಟ ಹತ್ತಿಯಂತೆ ಕಂಡಕಂಡವರನ್ನು ಅಂಟಿ ಕೊಳ್ಳುವ ಜನ್ಮ ಯಾಕೆ, ತಾಯಿ?

**ಮುದುಕಿ.**—ನಿನಗೆ ಏನಾಯಿತು, ಮಗಳೆ? ಏನಾದರೂ ಸೋಂಕೆ?

**ಬೀಬಿ.**—ಹೌದು; ಹೆಣ್ಣಾಗಿ ಹುಟ್ಟಿದವಳಿಗೆ ಎಲ್ಲಿ ನೋಡಿದರೂ ಸೋಂಕಲ್ಲದೆ ಮತ್ತೇನು?

**ಮುದುಕಿ.**—ಬೀಬಿ, ಇಂದು ನೀನು ಮಾತು ಮಾತಿಗೂ ಹೆಣ್ಣು ಹೆಣ್ಣು ಎನ್ನುತ್ತೀಯಲ್ಲಾ. ಹೆಣ್ಣಾಗಿ ಹುಟ್ಟಿದುದರಲ್ಲಿ ತಪ್ಪೇನು, ಬೀಬಿ?

**ಬೀಬಿ.**—ಹೆಣ್ಣಾದರೆ ತಪ್ಪಲ್ಲ. ಪ್ರಕೃತಿಯ ಶಾಂತಸೌಂದರ್ಯವು ಸ್ತ್ರೀಮೂರ್ತಿಯಲ್ಲಿ ರೂಪುಗೊಳ್ಳುವುದು. ಆದರೆ ನಮ್ಮಂತೆ ಇರುವುದು ಮಾತ್ರ ತಪ್ಪು; ಪಾಪ!

**ಮುದುಕಿ.**—ಮಗಳೆ! ನನ್ನ ಎದೆಯನ್ನೊಡೆದು ಸೀಳಬೇಡ.

**ಬೀಬಿ.**—ನನಗೆ ಮರಣದ ದಾರಿಯನ್ನು ತೋರಿಸಮ್ಮ!

**ಮುದುಕಿ.**—'ಮರಣ'! ಹಾಗೆಂದರೇನು, ಮಗಳೆ?

**ಬೀಬಿ.**—ಸಾಕು, ತಾಯಿ; ಈ ರೀತಿಯ ಜೀವನ ಸಾಕು. ಇನ್ನು ಬೇಕಾದುದು ಸಾವೊಂದು.

**ಮುದುಕಿ.**—ಎಂಥ ಹುಚ್ಚಾಟ ಬೀಬಿ ಇದು! ಸಾಯುವುದು—ಅದೇನು ವಿನೋದವೇ? ಒಂದು ಜೀವವನ್ನುಂಟು ಮಾಡಲು ಎಷ್ಟು

ಕಷ್ಟವೋ ಆ ದೇವನೇ ಬಲ್ಲ. ಆ ಜೀವವನ್ನು ಇಹಲೋಕದಿಂದ ಓಡಿಸು ವುದು! ಸಾಯುವುದು!! ಮತ್ತೆ ಈ ದೇಹ ಇಲ್ಲವೆಂದಾಗುವುದು! ಈ ಹೆಸರು ಇಲ್ಲವೆಂದಾಗುವುದು! ಅದೆಷ್ಟು ಭಯಂಕರ! (ಗದ್ಗದ ಕಂಠದಿಂದ) ನಿಜವಾಗಿ ಯೂ ಎಷ್ಟು ಭಯಂಕರ!

**ಬೀಬಿ.**—ಒಂದು ಕಾಲದಲ್ಲಿ ಭಯಂಕರವಾಗಿದ್ದಿತು. ಈಗ ಅಲ್ಲ.

**ಮುದುಕಿ.**—ನನ್ನ ಮಗಳು ನನಗಿಂತಲೂ ಮುದುಕಿಯೋ ?

**ಬೀಬಿ.**—ಸಾಯುವುದಕ್ಕೆ ಮುದುಕಿಯಾಗಬೇಕೆಂದೇನು ?

**ಮುದುಕಿ.**—ನಿನ್ನ ಹೃದಯವನ್ನು ಇಷ್ಟು ಕಠಿನವಾಗಿ ಮಾಡಿದವರು ಯಾರು, ಮಗಳೆ ? ನನಗೆ ಸಾಯಬೇಕೆಂದು ಕಾಣುವುದಿಲ್ಲ.

**ಬೀಬಿ.**—ಬದುಕಿರುವವರು ಬದುಕಿಕೊಳ್ಳಲಿ!

**ಮುದುಕಿ.**—ಈ ಮುಪ್ಪಿನಲ್ಲಿ, ನಾನೊಬ್ಬಳು, ಹರುಕು ಗುಡಿ ಸಲಿನಲ್ಲಿ, ಕಣ್ಣು ಕುರುಡಾಗಿ, ಕಾಲುಬಾರದೆ, ಬದುಕುವುದು! ನೀನು 'ಬದುಕಿಕೊಳ್ಳಲಿ' ಎನ್ನುವುದು. ಹೇಗೆ ಮನಸ್ಸು ಬರುತ್ತದೆ ನಿನಗೆ ?

**ಬೀಬಿ.**—ಮತ್ತೇನು ಮಾಡಲಿ ?

**ಮುದುಕಿ.**—ಇಂತಹ ಅವಸ್ಥೆ ಬಂದ ಮೇಲೆ ಬದುಕುವಷ್ಟು ಕಾಲ ಬದುಕುವುದು. ನೆಲವನ್ನಳೆವವರು ಸಂಕಲೆಯನ್ನು ಎಳೆವಂತೆ ಈ ಜೀವನ ವನ್ನು ಎಳೆಯುವುದು. ಸಂಕಲೆ ತುಂಡಾಗುವಾಗ ಸಾಯುವುದು!

**ಬೀಬಿ.**—ಈ ಸ್ಥಿತಿಯಲ್ಲಿ ಯಾಕೆ ಬದುಕಬೇಕು ?

**ಮುದುಕಿ.**—ಹಾ ದೈವವೇ ? ಯಾಕೆ ಬದುಕಬೇಕೆಂದು ಗೊತ್ತಾಗು ವುದಿಲ್ಲ! ಯಾರಿದ್ದಾರೆ, ಮಗಳೆ, ನಮಗೆ? (ಗದ್ಗದ ಕಂಠದಿಂದ) ನಮಗೆ ಲೋಕ ವೆಂದರೆ ಈಗ ಗುಡಿಸಲು. ಗೆಳೆಯರೆಂದರೆ ನಿನಗೆ ನಾನು; ನನಗೆ ನೀನು. ನೀನು ಕೇಳುತ್ತೀ ಯಾಕೆ ಬದುಕಬೇಕೆಂದು. ಇದಕ್ಕಾಗಿಯೇ ಬದುಕ ಬೇಕೆನ್ನುವುದು.

**ಬೀಬಿ.**—ಈ ನಾಚಿಕೆಯಲ್ಲಿ?

**ಮುದುಕಿ.**—ಇಂದು 'ನಾಚಿಕೆ' ಎನ್ನುವುದಕ್ಕೆ ಏನಿದೆ ?

**ಬೀಬಿ.**—ಹೆಣ್ಣಾಗಿ ಬಂದುದರಿಂದ.

**ಮುದುಕಿ.**— ಹೆಣ್ಣುಗಳಾಗಿ ಅಂದೇ ಹುಟ್ಟಿದ್ದೆವು. ನಾಚಿಕೆಯೂ ಅಂದೇ ಹೋಗಿದ್ದಿತು.

**ಬೀಬಿ.**— ಅದಕ್ಕೆ ಈಗ ಪ್ರಾಯಶ್ಚಿತ್ತ.

**ಮುದುಕಿ.**— ನನ್ನ ಕೈಗೋಲನ್ನು ಸೆಳೆದುಕೊಳ್ಳುವುದೇ? ಮನೆಯ ದೀಪವನ್ನು ಆರಿಸುವುದೇ? ಸಾಯುವ ಕಾಲಕ್ಕೆ ಬಾಯಿಗೆ ನೀರಿಲ್ಲದಂತೆ ಮಾಡುವುದೇ? ಎಂತಹ ನಿರ್ದಯೆ ನೀನು?

**ಬೀಬಿ.**— ಏನು ಬೇಕಾದರೂ ಆಗಲಿ. ನಮ್ಮ ಹೆಸರೊಂದು ನಿಷ್ಕಲಂಕವಾಗಿದ್ದರೆ ಸಾಕು.

**ಮುದುಕಿ.**— ಆತ್ಮಹತ್ಯೆಮಾಡಿಕೊಂಡರೆ ಆಗುವುದೇ?

**ಬೀಬಿ.**— ಆಗುವುದಿಲ್ಲ. ಆದರೂ ನಮ್ಮ ಪಾಪವಾರ್ತೆಯನ್ನು ಕೇಳುವಾಗ, ಕೆಲವರ ಹೃದಯದಲ್ಲಿ ಆದರೂ ಅನುಕಂಪೆ ಮೂಡಲಿ.

**ಮುದುಕಿ.**— ಅದಕ್ಕೆ ಈ ಕೆಲಸ!

**ಬೀಬಿ.**— ಹೌದು; ಪಾಪಕೂಪದಿಂದ ಏಳುವುದಕ್ಕೆ ಯತ್ನಿಸಿದೆ ವೆಂಬ ಒಂದು ಸಂತೋಷವಾದರೂ ಇರಲಿ. ಲೋಕವೆಲ್ಲಾ ಮುಸಲ್ಮಾನ ಮಯವಾಗಿಲ್ಲ. ಯಾವುದಾದರೊಂದು ರಾಜ್ಯದಲ್ಲಿ ನಮ್ಮ ಸಧರ್ಮೀಯರು ಇರಬಹುದು. ಅವರಲ್ಲಿ ಯಾವನಾದರೊಬ್ಬನ ಕಿವಿಗೆ ನಮ್ಮ ಪಶ್ಚಾತ್ತಾಪದ ಸುದ್ದಿ ಬಿದ್ದರೆ, ಒಂದು ಹನಿ ಕಣ್ಣೀರಾದರೂ ಸುರಿದೀತಲ್ಲವೇ?

**ಮುದುಕಿ.**— ಹಾ ಮಗಳೆ! ತಡವಾಗಿ ಕೊಟ್ಟ ಬುದ್ಧಿ ನನಗೆ!

**ಬೀಬಿ.**— ತಾಯೆ, ವ್ಯಸನವೇಕೆ? ಧೈರ್ಯದಿಂದ ಸಾಯಲು ಸಿದ್ಧರಾಗಿರಬೇಕು. ನಾವಿಂದು ಅನಾಥೆಯರಾಗಿ ಮಡಿಯುತ್ತೇವೆ. ಸತೀತ್ವವನ್ನು ಕಳೆದುಕೊಂಡರೇನು? ಸೀತೆಯ ಪಾತಿವ್ರತ್ಯವನ್ನು ಪರೀಕ್ಷಿಸಿದ ಅಗ್ನಿನಾರಾಯಣನು ನಮ್ಮ ಮೈ ಮುಟ್ಟಲು ಹೇಸಿದರೇನು? ಅಹಲ್ಯೆಯ ಪಾದಸ್ಪರ್ಶದಿಂದ ಪವಿತ್ರವಾದ ಈ ಮಣ್ಣು ನನ್ನ ದೇಹವನ್ನು ಕೊಳ್ಳಲು ಹೇಸಿದರೇನು? ಈ ದುಷ್ಟನಿಗೆ ನಿಪಾತಕಾಲವು ಬಂದಿತೆಂದು ಭಾವಿಸಿಕೊ. ಕಣ್ಣೀರಿನಿಂದ ನಂದದ ನಮ್ಮ ಹೃದಯಾಗ್ನಿ ಆತನನ್ನು ಸುಟ್ಟು ಬೂದಿ ಮಾಡುವುದು. ಎಳೆ ಬಾಳೆಯ ಕಂದುಗಳಂತೆ ಹಚ್ಚನೆಯ ಸೌಂದರ್ಯವನ್ನು ಹೊಂದಿದ ಆ ರಜಪೂತ ತರುಣಿಯರು ಶಹನ ಅಂತಃಪುರದಲ್ಲಿ ಗೂಗೆಗಳಂತೆ

ಕೂಗುತ್ತಿರುವುದನ್ನು ನೋಡು. ಅವರ ಕಣ್ಣೀರೇ ಇವನನ್ನು ನರಕಕ್ಕೆ ಒಯ್ಯುವುದು. ಇವನನ್ನು ಘೋರ ಮೃತ್ಯುವಿನ ಬಾಯಿಗೆ ದೂಡುವುದು, ಆಯಿತು, ತಾಯಿ, ಬೇಕಾದಷ್ಟು ಸ್ತ್ರೀಬಲಿಯಾಯಿತು. ನೋಡಬಾರದು ದನ್ನು ನೋಡಿದುದಾಯಿತು. ಆಗಬಾರದುದು ಆಗುವ ಮೊದಲೇ

**ಮುದುಕಿ.**—ಸಾಕು ಬೀಬಿ. ಹೆಚ್ಚು ಮಾತಾಡಬೇಡ.

**ಬೀಬಿ.**—ಮಾತು ಅವಶ್ಯವಾಗಿಲ್ಲ. ಹೇಳಿದಂತೆ ಮಾಡುವುದು.

**ಮುದುಕಿ.**—ಅಯ್ಯೋ! ನನ್ನ ಪ್ರಾಣವೇಕೆ ಹಾರಿಹೋಗುವುದಿಲ್ಲ?

**ಬೀಬಿ.**—ನಾವು ಹೇಳಿದಂತೆ ಪ್ರಾಣ ಹಾರಿಹೋಗುತ್ತಿದ್ದರೆ

**ಮುದುಕಿ.**—ನಾಚಿಸಬೇಡ ಮಗಳೆ!

**ಬೀಬಿ.**—ನಾಚಿಗೆಗಾಗಿ ನಾನು ಹೇಳುವ ಮಾತಲ್ಲ.

**ಮುದುಕಿ.**—ನೋಡು ನನ್ನ ಜರ್ಜರಿತ ದೇಹವನ್ನು. ಇದೀಗ, ಹಿಂದೂ ಸ್ತ್ರೀ ಧರ್ಮದ ಗೋರಿ!

**ಬೀಬಿ.**—ವ್ಯಸನಾಸ್ಪದವಿದು; ಆದರೂ ಸತ್ಯ.

**ಮುದುಕಿ.**— ಇನ್ನು ಸಾಯಲೂ ನಾಚುತ್ತೇನೆ, ಮಗಳೆ. ಮೃತ್ಯುವೂ ಹೇಸದಿರದು ನನ್ನ ದೇಹಸ್ಪರ್ಶಕ್ಕೆ-

**ಬೀಬಿ.**—ಹೂಂ.

**ಮುದುಕಿ.**—ಒಂದು ವೇಳೆ ನಾನು ಸತ್ತೆ; ಜನರು ಏನೆಂದಾರು? ಜೀವನದ ಸುಗ್ಗಿಯನ್ನು ಶಹನ ಅಂತಃಪುರದಲ್ಲಿ ಕಳೆದು ಅವನು ಬಿಟ್ಟ ಮೇಲೆ ಶಿಶಿರ ಋತುವಿನಲ್ಲಿ, ಸಾವು ಬರುವ ಒಂದೆರಡು ದಿನಗಳ ಮುಂಚೆ ಆತ್ಮಹತ್ಯಮಾಡಿಕೊಂಡಳು; ಎಂದಲ್ಲವೇ?

**ಬೀಬಿ.**—ಜನರು ಏನು ಬೇಕಾದರೂ ಹೇಳಲಿ.

**ಮುದುಕಿ.**—ಸಾಯು ಬೇಕಿತ್ತು ಅಂದೇ, ಇಂದಲ್ಲ.

**ಬೀಬಿ.**—ಅಂದು ಬದುಕಿದೆವು. ಇಂದಾದರೂ ಅದರ ಪ್ರತಿಕ್ರಿಯೆ ಯಾಗಲಿ!

**ಮುದುಕಿ.**—ಅಯ್ಯೋ! ನಿನ್ನ ಮನಸ್ಸೇ! ಸಿಡಿಲ ಬೆಂಕಿಯಿಂದ ಮಾಡಿದ ಮನಸ್ಸೇ!

**ಬೀಬಿ.**—ಜನರು ಹೇಗೆ ಬೇಕಾದರೂ ಹೇಳಲಿ; ಲೋಕವು ಯಾವ ದಿಕ್ಕಿಗೇ ತಿರುಗಲಿ. ನಮ್ಮ ಕರ್ತವ್ಯವಿದು. ರಜಪೂತ ಸ್ತ್ರೀಯರಾಗಿ ಹುಟ್ಟಿದುದಕ್ಕೆ ಸಾಫಲ್ಯವೇ ಇದು. ಆ ಯವನನ 'ಜನಾನ'ವನ್ನು ಪ್ರವೇಶಿಸಿದಾಗ ಲೋಕಾಪವಾದ ಚಿಂತನೆ ಎಲ್ಲಿಗೆ ಹೋಗಿದ್ದಿತು ? ಅಹಮ್ಮದ್ ಶಹನ ಬಟ್ಟಲಿನಿಂದ ಮದಿರೆಯನ್ನು ಕುಡಿವಾಗ, ಲೋಕಾಪವಾದವಿರಲಿಲ್ಲ?

**ಮುದುಕಿ.**—ಇದೆಲ್ಲಾ ನಿಜವೆ. ಆದರೆ ಸ್ವಲ್ಪ ಸಮಯ ತಡೆದರೇನು ?

**ಬೀಬಿ.**—ಇದು ವರೆಗೆ ಇದ್ದ ಅಪಮಾನವನ್ನು ಸಹಿಸಬೇಕಾಗುವುದು !

**ಮುದುಕಿ.**—ಇಂದು ಕರೆದರೆ ಬರುವ ಮೃತ್ಯು ನಾಳೆಯೂ ಬಂದೀತು. ಆದರೆ ಆಶೆ ಬಂದೀತೇ ?

**ಬೀಬಿ.**—ದುರಾಶೆ !

**ಮುದುಕಿ.**—ಹೆತ್ತ ಮಗನ ಅಭಿವೃದ್ಧಿಯನ್ನು ನೋಡಬೇಕೆಂಬುದೂ ದುರಾಶೆಯೋ ?

**ಬೀಬಿ.**—ಹೆಮ್ಮರದಂತೆ ದೇಹ ಬೆಳೆದರೆ ಅದೂ ಅಭಿವೃದ್ಧಿಯೋ ?

**ಮುದುಕಿ.**—ಅಜಿತನನ್ನು ನಿಂದಿಸಬೇಡ. ನನ್ನ ಜೀವ ಬದುಕುವುದು ಆತನ ಸ್ಮರಣೆಯಲ್ಲಿ ಹಿಡಿದು ನೇತಾಡಿ.

**ಬೀಬಿ.**—ಅಜಿತನಲ್ಲಿ ? ಯಾವ ಮಸಣದಲ್ಲಿ ?

**ಮುದುಕಿ.**—ಹೀಗೆ ಹೇಳ ಬೇಡ. ಅಜಿತನು ನನ್ನ ಕರುಳು; ನಿನ್ನೊಡನೆ ಒಂದೇ ತೊಟ್ಟಿನಲ್ಲಿ ಅರಳಿದ ಕುಸುಮ.

**ಬೀಬಿ.**—'ಅಜಿತ' ! ಆ ಹೆಸರನ್ನು ಕೇಳಿದೊಡನೆ

**ಮುದುಕಿ.** ಯಾಕೆ ಅವನ ಮೇಲೆ ಜರೆದು ಬೀಳುವೆ ? ಆತನ ಅಪರಾಧವೇನು ?

**ಬೀಬಿ.**—ಯಾರ ಅಪರಾಧ ಏನೂ ಇಲ್ಲ.

**ಮುದುಕಿ.**—ಅವನಿಗೊಂದೂ ಗೊತ್ತಿರಲಿಲ್ಲ. ಕಣ್ಣಿಗೆ ಜ್ಞಾನ ದೃಷ್ಟಿ ಬಂದಿರಲಿಲ್ಲ. ಕಾಲಿಗೆ ನಡೆವ ಬಲ ಬಂದಿರಲಿಲ್ಲ. ಕೈ ಪಟುವಾಗಿರಲಿಲ್ಲ. ತೊಟ್ಟಿಲಲ್ಲಿ ತೂಗುವ ಮಗುವಾಗಿದ್ದಾಗ ಬೀಬಿ

**ಬೀಬಿ.**—ಇಂತಹ ದುರಾಶೆಯನ್ನು ಬಿಡು ತಾಯಿ. ನಮಗೂ ಅವನಿಗೂ ಯಾವ ಸಂಬಂಧವೂ ಇಲ್ಲ.

**ಮುದುಕಿ.**—ಹಾಗೆಂದರೇನು, ವಿನೋದಿನಿ? ನನ್ನ ಮುದ್ದು ಕಂದ ನನ್ನು ನಿರಾಕರಿಸಬೇಕು.

**ಬೀಬಿ.**—'ಕಂದ' 'ಕಂದ' ಎಂದು ಕೂಗುತ್ತಿರುವೆಯಲ್ಲ. ನಿನ್ನ ಮುಪ್ಪಿನಲ್ಲಿ ಆ ಕಂದನೆಲ್ಲಿದ್ದಾನೆ?

**ಮುದುಕಿ.**—ಅಯ್ಯೋ! ಮಗು! ಅಜಿತ! ನೀನು ನನ್ನ ಮಗ ನಲ್ಲವಂತೆ! (ಸ್ವಲ್ಪ ಕಾಲ ಅತ್ತು) ಹೌದಮ್ಮ ಹೌದು; 'ಮಗನೇ' ಎಂಬ ಶಬ್ದವು ಮರೆತು ಹೋಗಿದೆ ನನಗೆ. ಅವನ್ನು ಉಚ್ಚರಿಸುವಾಗ ಹೇಗೆ ಮುಗ್ಧ ಪ್ರೇಮದಿಂದ ಎದೆ ಉಕ್ಕಿ ಹರಿಯುತ್ತದೆ ಎಂಬುದು ಮರೆತು ಹೋಗಿದೆ, ನಿಜ; ಆದುದರಿಂದ ಅವನ್ನು ಇಂದು 'ಮಗನೆ' ಎಂದು ಸಂಬೋಧಿಸಲು ಧೈರ್ಯವಿಲ್ಲ.

**ಬೀಬಿ.**—ನಿನಗೆ ಇನ್ನಾವ ಆಸೆ?

**ಮುದುಕಿ.**—ಯಾವುದೂ ಇಲ್ಲ. ಹಾ! ಪೂರ್ವ ಸ್ಮರಣೆಯೇ! ವಿಷಕ್ಕಿಂತಲೂ ಕಠಿನವಾಗಿದೆ. ವಿಷವು ಪ್ರಾಣ ತೆಗೆಯುತ್ತದೆ. ಇದು ಹಾಗಲ್ಲ. ಪ್ರಾಣವನ್ನು ಚುಚ್ಚಿ ವೇದನೆಕೊಟ್ಟು ಹಲಗಾಲ ಬದುಕಿಸುತ್ತದೆ. ಹಾ! ಅಜಿತ!! (ಎಂದು ಮೂರ್ಛೆ ಹೋಗುವಳು).

**ಬೀಬಿ.**—ಇಚ್ಚಿಸಿದ ಮರಣ ತಾನಾಗಿ ಬಂತು [ಎಂದು ಸಮೀಪದಲ್ಲಿ ಕುಳಿತು ಶುಶ್ರೂಷೆ ಮಾಡುವಾಗ ಬಾಗಿಲು ಹೊಡೆದ ಶಬ್ದವಾಗುವುದು. ಅಜೀಮನು ಪ್ರವೇಶಿಸುವನು].

**ಅಜೀಮ.**—ಅಯುಷೆ! ಹೆದರಬೇಡ. ನಿಮ್ಮಂಥವರ ರಕ್ಷಣೆಗಾಗಿಯೇ ಈ ಖಡ್ಗ.

**ಬೀಬಿ.**—ಯಾರು ಅಜೀಮ್ ಖಾನರೇ! ಕುಳಿತುಕೊಳ್ಳಿರಿ.

**ಅಜೀಮ.**—ಏನಿದು ಪ್ರಮಾದ!

**ಬೀಬಿ.**—ಪ್ರಮಾದವೇನೂ ಇಲ್ಲ, ಖಾವಂದರೇ! ಬಳಲಿದ ಪ್ರಕೃತಿ ನಿದ್ದೆ ಮಾಡುತ್ತಿದೆ; ಅಷ್ಟೆ!

**ಅಜೀಮ** (ಮುಖವನ್ನು ಪರೀಕ್ಷಿಸಿ).—ಮುಖವು ಬಿಳುಪೇರಿದೆ.

**ಬೀಬಿ.**—ಹೌದು; ತುಟಿಗಳು ಕಪ್ಪಾಗಿವೆ.

**ಅಜೀಮ.**—ಮುಖದ ಬದಿಗಳು ಕಪ್ಪೇರಿವೆ.

**ಬೀಬಿ.**—ಹೌದು, ಖಾವಂದರೆ, ಮುಪ್ಪಿನ ಹೊಗೆ ಹಿಡಿದಿದೆ.

**ಅಜೀಮ.**—ಮುಪ್ಪಿನದೋ ಮೃತ್ಯುವಿನದೋ ನೋಡು !

**ಬೀಬಿ.**—ಶೈತ್ಯೋಪಚಾರ ಮಾಡಿದೆ. ಏಳುವುದಿಲ್ಲ.

**ಅಜೀಮ.**—ಹಾಗಾದರೆ, ಈ ಫಲ ಕೊಟ್ಟು ಕಡಿದು ಬಿದ್ದಿತಲ್ಲವೇ ?

**ಬೀಬಿ.**—ಕೊಳೆತ ಫಲ ಬಿದ್ದುದರಲ್ಲಿ ಆಶ್ಚರ್ಯವಿಲ್ಲ.

**ಅಜೀಮ.**—ಬೀಬಿ ! ಯಾರೀಕೆ ?

**ಬೀಬಿ.**—ನನ್ನಂತೆಯೇ ಒಬ್ಬಳು ಹೆಂಗಸು.

**ಅಜೀಮ.**—ಹಾಗೆಂದರೆ ಉತ್ತರವೆ, ಬೀಬಿ ?

**ಬೀಬಿ.**—ನನ್ನದರಂತೆಯೇ ಅವಳದೂ ಬೇಡದ ಜನ್ಮ !

**ಅಜೀಮ.**—ಯಾರೀಕೆ? ನನಗೆ ತಿಳಿಸುವುದಿಲ್ಲ ನೀನು ?

**ಬೀಬಿ.**—ತಿಳಿಯ ಬೇಕಾದುದೆಲ್ಲಾ ಲೋಕಕ್ಕೆ ಗೊತ್ತಿದೆ.

**ಅಜೀಮ.**—ವ್ಯಸನ ಪ್ರಪಂಚವಿದು.

**ಬೀಬಿ.**—ಹೌದು; ಅದನ್ನು ಮತ್ತೊಮ್ಮೆ ಹೇಳುವುದೇಕೆ ?

**ಅಜೀಮ.**—ಈಕೆ ಹುಟ್ಟಿದಾರಭ್ಯ ಇದೇ ನಡತೆಯೇ ?

**ಬೀಬಿ.**—ಹುಟ್ಟುವಾಗ ಎಲ್ಲ ಕುಸುಮಗಳಂತೆ ಮೊಗ್ಗೆಯಾಗಿ ಹುಟ್ಟಿತು. ಮತ್ತೆ ಮಾತ್ರ ವಿಷಕುಸುಮವಾಯಿತು.

**ಅಜೀಮ.**—ಅಲ್ಲ ಬೀಬಿ. ನೀನೆಲ್ಲವನ್ನೂ ಬಿಚ್ಚಿ ಹೇಳುವುದಿಲ್ಲ. ಇದರ ಹಿಂದೆ ಏನೋ ಒಂದು ಕಥೆಯಿದೆ.

**ಬೀಬಿ.**—ಆ ವಿಚಾರ ನಿಮಗೇಕೆ, ಖಾವಂದರೇ ?

**ಅಜೀಮ.**—ಇವಳು ಸಾಯುವಾಗ 'ಅಜಿತ ! ಅಜಿತ !' ಎಂದು ಆಕ್ರೋಶಿಸುತ್ತಿದ್ದಳಲ್ಲಾ, ಅದರ ಅರ್ಥವೇನು ?

**ಬೀಬಿ** (ಆತ್ಮಗತ).—ಎಲ್ಲವನ್ನೂ ಕೇಳಿದ್ದಾನೆ ಈತ. (ಪ್ರಕಾಶ) ಹೌದು, ಖಾವಂದರೆ ! ಆಯುಸ್ಸು ಯಾವ ಅವಸ್ಥಾಂತರಗಳನ್ನು ಹೊಂದಿದರೂ ಹೃದ

ಯವು ಒಮ್ಮೊಮ್ಮೆ ಪೂರ್ವಾನುಭವಗಳ ರಾಜ್ಯದಲ್ಲಿ ಅಲೆದಾಡುವುದಿಲ್ಲವೇ ? ಅಂತಹ ಒಂದು ಸಂದರ್ಭದಲ್ಲಿ ಅತ್ತಿತು, ಪಾಪ, ಈ ಮಣ್ಣ ಬೊಂಬೆ.

**ಅಜೀಮ.** — ಬಹುಶಃ ಹಿಂದೂ ಸ್ತ್ರೀಯಾಗಿದ್ದಾಗ

**ಬೀಬಿ.** — ಹೌದು. ಅವಳನ್ನು ಸಂತೈಸುವುದಕ್ಕೆ ಲೌಕಿಕ ಸಾಂತ್ವನಗಳು ಸಾಲಲಿಲ್ಲ. ಮೃತ್ಯುವೇ ಬರಬೇಕಾಯಿತು.

**ಅಜೀಮ.** — 'ಅಜಿತ' ಎಂದೊಡನೆ ನನಗೆ ರೋಮಾಂಚವಾಗುವುದಲ್ಲಾ! ಅದೇಕೆ ಬೀಬಿ ?

**ಬೀಬಿ.** — ಯಾರು ಬಲ್ಲರು ಖಾವಂದರೆ ?

**ಅಜೀಮ.** — ಬೇರಾವ ಹೆಸರನ್ನು ಕೇಳಿದರೂ ಹಾಗಾಗುವುದಿಲ್ಲ.

**ಬೀಬಿ.** — ಪೂರ್ವ ಜನ್ಮದಲ್ಲಿ ತಾವು ಅಜಿತನೆಂಬ ವೀರರಾಗಿ ಹುಟ್ಟಿದ್ದಿರ ಬಹುದು.

**ಅಜೀಮ.** — ಹಾಗೆಂದರೇನು ?

**ಬೀಬಿ.** — ನಮಗೆ ಪೂರ್ವಜನ್ಮ ಪುನರ್ಜನ್ಮಗಳಲ್ಲಿ ವಿಶ್ವಾಸವುಂಟು, ಖಾವಂದರೆ. ತಮ್ಮ ಪೂರ್ವಜನ್ಮದ ಸಂಸ್ಕಾರವು ಆ ಹೆಸರನ್ನು ಅಂಟಿಕೊಂಡು ತಮ್ಮ ಹೃದಯದಲ್ಲಿ ತರಂಗವೆಬ್ಬಿಸಿತು. ಆದುದರಿಂದ ರೋಮಾಂಚವಾಗಿರಬಹುದು.

**ಅಜೀಮ.** — ಆಗಿರಬಹುದು. ಆದರೆ ಬೇರೆ ಕಾರಣವಿಲ್ಲ !

**ಬೀಬಿ.** — ನನಗೇನು ಗೊತ್ತು ಖಾವಂದರೆ ?

**ಅಜೀಮ.** — ನಾನು ಒಂದೇ ಒಂದು ಮಾತನ್ನು ಕೇಳುತ್ತೇನೆ; ಬೀಬಿ. ಅದಕ್ಕೆ ಉತ್ತರ ಕೊಡಬೇಕು.

**ಬೀಬಿ.** — ಸಾಧ್ಯವಿದ್ದರೆ

**ಅಜೀಮ.** — ನೀನು ನನ್ನ ಹಿರಿಯಳು ಪ್ರಾಯದಲ್ಲಿ; ಹೇಳುತ್ತಾರೆ ಕೆಲವರು; ನಮ್ಮ ಮುಖಚರ್ಯೆ ಒಂದೆ ತೆರವಾಗಿದೆಯೆಂದು.

**ಬೀಬಿ.** — ಯಾಕೆ ಇರಬಾರದು ಖಾವಂದರೆ ? ಅನೇಕ ವಿಷಯಗಳಲ್ಲಿ ಒಂದು ವಸ್ತು ಇನ್ನೊಂದಕ್ಕಿಂತ ಭಿನ್ನವಾಗಿದ್ದರೂ ಕೆಲವರಲ್ಲಿ ಸದೃಶವಾಗಿರುತ್ತದೆ.

**ಅಜೀಮ.**— ಹಾಗಲ್ಲ. ಪ್ರಾಪಂಚಿಕ ಸಂಬಂಧವೂ ನಮಗೆ ಉಂಟೆಂದು ಆಡುವ ಮಾತನ್ನು ಕೇಳಿದ್ದೇನೆ.

**ಬೀಬಿ.**—ಅದೂ ಸರಿ. ತಾವು ಶಹನ ಅಧಿಕಾರಿಗಳು; ನಾನು ಅದೇ ಶಹನ ದಾಸಿ.

**ಅಜೀಮ** (ನಿಟ್ಟುಸಿರು ಬಿಟ್ಟು).—ಮತ್ತೂ ಇದೇ ಮಾತು. ಇದಕ್ಕಿಂತ ಹೆಚ್ಚಿನ ಸಂಬಂಧವಿಲ್ಲ !

**ಬೀಬಿ.**—ಒಂದೇ ಹಂಗಿನ ಅನ್ನ ಇಬ್ಬರಿಗೂ.

**ಅಜೀಮ.**—ಸತ್ಯವಿದು. ಆದರೆ ಬೇರೆ ಸಂಬಂಧವೇನೂ ಇಲ್ಲ ?

**ಬೀಬಿ.**—ನಮ್ಮ ಈ ಸ್ಥಿತಿಯಲ್ಲಿ ಇರುವ ಸಂಬಂಧವನ್ನೇ ಮರೆಯಬೇಕೆಂದು ತೋರುತ್ತದೆ. ಇಲ್ಲದ ಸಂಬಂಧವನ್ನು ಹುಡುಕಬೇಕೇ, ಖಾವಂದರೆ ?

**ಅಜೀಮ.**—ಬೀಬಿ ! ಒಗಟುಗಳನ್ನು ಹೇಳಬೇಡ.

**ಬೀಬಿ.**—ಖಾನರೇ ! ನನ್ನಂತಹ ಕುಲಹೀನೆಗೆ ಒಗಟು ಹೇಳಿಯೇ ಕಾಲಕ್ಷೇಪವಾಗಬೇಕು.

**ಅಜೀಮ.**—ಬೀಬಿ ! ನನಗೆ ಸ್ಪಷ್ಟವಾಗಿ ಹೇಳು. ನನ್ನನ್ನು ಈ ಪ್ರಪಂಚಕ್ಕೆ ಕಟ್ಟುವ ಪಾಶವಾವುದೂ ಇಲ್ಲವೇ ?

**ಬೀಬಿ.**—ಅದು ನನಗೇನು ಗೊತ್ತು ?

**ಅಜೀಮ.**—ನಾನು ತಂದೆ ತಾಯಿಗಳ ಹೊಟ್ಟೆಯಿಂದ ಬಿದ್ದವನಲ್ಲ!

**ಬೀಬಿ.**—ಹಾಗೆಂದರೇನು ಖಾವಂದರೆ ?

**ಅಜೀಮ.**—ನನಗೆ ಇದು ವರೆಗೆ ಮಾತಾಪಿತೃಗಳು ಯಾರೆಂದು ತಿಳಿವ ಚಿಂತನೆಯೇ ಹುಟ್ಟಿರಲಿಲ್ಲ. ನನ್ನಂತೆಯೇ ಮನುಷ್ಯರಾಗಿ ಹುಟ್ಟಿದವರು ತಾಯ್ತಂದೆಗಳನ್ನು ಹುಡುಕುವ ಕ್ರಮವಿಲ್ಲ. ಹಾಗೆಯೇ ನಾನೂ ಇದ್ದೆ. ಆದರೆ ಈಗ ಎಲ್ಲರಂತಲ್ಲ ನಾನು, ಎಂದು ಭಾವಿಸುತ್ತೇನೆ.

**ಬೀಬಿ.**—ನಿಮ್ಮನ್ನು ಪಡೆದವರೆಷ್ಟು ಧನ್ಯರೋ!

**ಅಜೀಮ.**—ಧನ್ಯರೋ ಅಧನ್ಯರೋ ಯಾರಿಗೆ ಗೊತ್ತು ?

**ಬೀಬಿ.**—ಎಂತಹ ಮಾತಿದು ?

**ಅಜೀಮ.**—ಮೊನ್ನೆ ಮಿಶ್ರನು ಯಾರೊಡನೆಯೋ ಆಡುತ್ತಿದ್ದನು. ನಾನು ರಜಪೂತನೆಂದು.

**ಬೀಬಿ.**—ವೀರರಾದವರನ್ನೆಲ್ಲಾ ರಜಪೂತರೆಂದು ಹೇಳುವುದು ಹಿಂದುಗಳ ಪದ್ಧತಿ.

**ಅಜೀಮ.**—ಹಾಗಾದರೆ, ಶಹನ ಅಪಾರ ಸೈನ್ಯದಲ್ಲಿ **ನಾನೊಬ್ಬನೇ** ವೀರ; **ನಾನೊಬ್ಬನೇ** ರಜಪೂತ; ಅಲ್ಲವೇ ?

**ಬೀಬಿ.**—ಯಾಕೆ ಆಗಬಾರದು ?

**ಅಜೀಮ.**—ಇದೆಲ್ಲಾ ಸುಳ್ಳು, ಬೀಬಿ. ನಿನಗೆಲ್ಲಾ ತಿಳಿದಿದೆ. ಆದರೆ ಬಾಯ್ದೆರೆದು ಹೇಳುವುದಿಲ್ಲ.

**ಬೀಬಿ** (ಆತ್ಮಗತ).—ನನ್ನ ಉಭಯ ಸಂಕಟವನ್ನು ಹೇಗೆ ವರ್ಣಿಸಲಿ ? ಕಣ್ಣ ಮುಂದೆ ಸೋದರನು ನಿಂತಿದ್ದು ತನ್ನ ಸಂಬಂಧವನ್ನು ಕೇಳುತ್ತಾನೆ. ಹೇಳಲು ಬಾಯಿ ಬರುವುದಿಲ್ಲ. (ಪ್ರಕಾಶ) ಖಾವಂದರೆ, ಜನರು ಏನೋ ಆಡುತ್ತಾರೆ.

**ಅಜೀಮ.**—ಆಡುವುದು ಮಾತ್ರವಲ್ಲ; ಸತ್ಯವೂ ಹೀಗೆಯೇ ಎಂದು ಅಂತರಾತ್ಮನು ಹೇಳುತ್ತಾನೆ. ನನಗೆ ಅರಮನೆಯಲ್ಲಿ ಯಾವ ಸುಖಕ್ಕೂ ಕಡಿಮೆಯಿಲ್ಲ. ಆದರೆ ಯಾವ ಕೆಲಸಕ್ಕೆ ಹೋದರೂ ಚಿತ್ತವು ಹರ್ಷದಿಂದ ಮುಂದೆ ಹಾರುವುದಿಲ್ಲ. 'ಇದು ನಿನ್ನ ಸ್ಥಳವಲ್ಲ' ಎಂಬ ಧ್ವನಿಯೊಂದು ಹೃದಯ ಕಂದರದಲ್ಲಿ ಪ್ರತಿಧ್ವನಿಸುತ್ತದೆ.

**ಬೀಬಿ** (ಆತ್ಮಗತ).—ಅಯ್ಯೋ ಸಹೋದರ! ಈ ಕುಲಟೆಯು ನಿನ್ನ ಅಕ್ಕನೆಂದು ಹೇಳುವುದು ಹೇಗೆ ? (ಪ್ರಕಾಶ) ಪ್ರಭುಗಳೇ! ತಮ್ಮಲ್ಲಿ ವಂಚನೆಯೇಕೆ ? ಹೌದು; ತಾವು ವಿಶುದ್ಧ ರಾಜಪುತ್ರ ಕುಲದಲ್ಲಿ ಹುಟ್ಟಿದವರು.

**ಅಜೀಮ.**—ಇಲ್ಲಿ ಸತ್ತು ಬಿದ್ದ ಹೆಂಗುಸು ಯಾರು ?

**ಬೀಬಿ.**—ಅವಳು ನನ್ನ ತಾಯಿ, ಖಾವಂದರೆ!

**ಅಜೀಮ.**—ನನ್ನ ತಾಯಿಯಲ್ಲ?

**ಬೀಬಿ** (ಆತ್ಮಗತ).—ಈತನಿಗೆ ಯಾವ ಉತ್ತರವನ್ನೀಯಲಿ ? ಹೀಗೆ ಹೇಳುತ್ತೇನೆ. (ಪ್ರಕಾಶ) ಅಲ್ಲ. ನಿನ್ನಂತಹ ಒಬ್ಬ ವೀರನ ತಾಯಿ.

**ಅಜೀಮ.**—ಆ ವೀರನೆಲ್ಲಿದ್ದಾನೆ? ಅವನ ಹೆಸರೇನು?

**ಬೀಬಿ.**—ಅವನ ಹೆಸರು ಅಜಿತನೆಂದು. ಈಕೆಯನ್ನು ಶಹನ ಸೆರೆಯಾಗದಂತೆ ಪ್ರಯತ್ನಿಸುವಾಗ, ಅವನ ಆತ್ಮವು ಈ ಪ್ರಪಂಚದ ಸೆರೆಯನ್ನು ತಪ್ಪಿಸಿಕೊಂಡಿತು.

**ಅಜೀಮ.**—ಸಹೋದರಿ! ನನ್ನ ಮನಸ್ಸನ್ನು ತಿಳಿದೂ ಸುಳ್ಳು ಹೇಳುವೆಯಾ?

**ಬೀಬಿ.**—ಸುಳ್ಳಲ್ಲ, ಖಾನರೇ!

**ಅಜೀಮ.**—ಆ ಹೆಸರನ್ನು ಉಚ್ಚರಿಸ ಬೇಡ.

**ಬೀಬಿ.**—ಮತ್ತೆ ಹೇಗೆ ಕರೆಯಲಿ, ಖಾವಂದರೆ?

**ಅಜೀಮ.**—'ಅಜಿತ' ಆ ಹೆಸರಲ್ಲಿ ಎಷ್ಟು ಅರ್ಥವಿದೆ! ಎಷ್ಟು ಪಾವಿತ್ರ್ಯವಿದೆ! ಹಾಗೆಯೇ ಸಂಬೋಧಿಸು ನನ್ನನ್ನು.

**ಬೀಬಿ.**—ಕ್ಷತ್ರಿಯ ವಂಶಜನೇ! ನಿನಗೆ ಆ ಹೆಸರು ಒಪ್ಪುವುದು. ನೀನು ಅಜಿತನಾಗಿರುವೆ; ಇನ್ನು ಮುಂದೆಯೂ ಅಜೇಯನಾಗಿರು. ಆದರೆ ನನ್ನನ್ನು ಮಾತ್ರ ಆ ಕಲ್ಮಷಿತ ನಾಮದಿಂದ ಸಂಬೋಧಿಸುವೆಯಾ? ನನ್ನನ್ನು 'ವಿನೋದಿನಿ' ಎಂಬ ಹೆಸರಿನಿಂದ ಗೌರವಿಸು, ಅಜಿತ!

**ಅಜೀಮ.**—ಎಲ್ಲವೂ ಕನಸಿನ ಕಾರಭಾರದಂತೆ. ಹಾ! ಆ ಜನ್ಮವೆಲ್ಲಿ? ಈ ನರಕವೆಲ್ಲಿ? ಇನ್ನೇನು ಮಾಡೋಣ? ನಾನು ಕ್ಷತ್ರಿಯ ವಂಶೋತ್ಪನ್ನನೆಂಬುದರಿಂದ ಮನಸ್ಸಿಗೆ ಒಂದು ನೆಲೆಯಾಯಿತು. ನಾನೂ ಕ್ಷತ್ರಿಯ! ಅಬಲಾರಕ್ಷಣೆಗೆ ಹುಟ್ಟಿದವ, ಅಬಲಾಹಿಂಸೆಗಲ್ಲ, ತಿಳಿಯಿತು. ಈ ಖಡ್ಗಕ್ಕಿನ್ನು ಒರೆಯೇ ಗತಿ. ಹೊರ ಬಂದರೆ, ಮುಸಲ್ಮಾನರ ತಲೆಯ ಮೇಲೆ ಬುಸುಗುಟ್ಟಿ ಹಾರುವುದು. ನನಗೇನೂ ತೋರುವುದಿಲ್ಲ, ವಿನೋದಿನಿ. ನನ್ನ ಕರ್ತವ್ಯವೇನು?

**ಬೀಬಿ.**—ಕರ್ತವ್ಯವೇನು ಅಜಿತ? ಸೇವಕರಿಗೆ ಯಾವ ಕರ್ತವ್ಯ? ಅದು.

**ಅಜೀಮ.**—ಹೌದು; ನಾನು ಇಂದು ಸೇವಕನು. ಆದರೆ ಆತ್ಮವು ಸೇವಾವೃತ್ತಿಯನ್ನು ಕೈಕೊಳ್ಳಲಿಲ್ಲ.

**ಬೀಬಿ.**—ಹಾಗಾದರೆ ನಿನ್ನ ಕರ್ತವ್ಯ ಒಂದೇ.

**ಅಜೀಮ.**—ಹೇಳು ಅದೇನೆಂದು.

**ಬೀಬಿ.**—ಆಹೋರಿಗೆ ನೀವು ದಾಳಿಯಿಡುವಿರಿ. ಹೀಗೆ ಮಾಡದೆ ನಿರ್ವಾಹವಿಲ್ಲ. ಈಗಲೇ ನೀವು ಪ್ರತಿಭಟಿಸಿದರೆ, ನಿಮಗೂ ವಿಪತ್ತು; ಆಹೋರಿಗೂ ಪ್ರಲಯ.

**ಅಜೀಮ.**—ಸರಿ ನಿನ್ನ ಮಾತು.

**ಬೀಬಿ.**—ಅಲ್ಲಿಯ ವರೆಗೆ ಸೈನ್ಯವನ್ನು ಕಟ್ಟಿಕೊಂಡು ಹೇಗಾದರೂ ಹೋಗಲೇ ಬೇಕು. ಹೋಗಿ, ಯಾವುದಾದರೊಂದು ನೆವದಿಂದ ಆ ರಜಪೂತರ ರಕ್ತವು ಕೋಡಿ ಹರಿಯುವುದನ್ನು ನಿಲ್ಲಿಸ ಬೇಕು!

**ಅಜೀಮ.**—ಅದು ಹೇಗೆ ಸಾಧ್ಯ, ವಿನೋದಿನಿ?

**ಬೀಬಿ.**—ಹೋಗಲಿ! ರಕ್ತವು ಹರಿಯಲಿ! ಆದರೆ ನೀನು ಮಾತ್ರ ಸ್ವಧರ್ಮೀಯರ ವಧೆಯಿಂದ ನಿನ್ನ ಕ್ಷಾತ್ರ ತೇಜಸ್ಸಿಗೆ ಕಲೆ ಹಿಡಿಸಬೇಡ.

**ಅಜೀಮ.**—ಈ ಕತ್ತಿಗೆ ಸನ್ಯಾಸ ಕೊಡಲು ಕಷ್ಟವಿಲ್ಲ.

**ಬೀಬಿ.**—ಅಜಿತ! ಎಷ್ಟು ಬುದ್ಧಿಮತಿಯೆಂದು ನಾನು ಆಡಿದರೂ ಮುಂದೆ ಹೇಳುವುದೇನೋ ತಿಳಿಯದು.

**ಅಜೀಮ.**—ಹಾಗೆಂದರೆ ?

**ಬೀಬಿ.**—ರಜಪೂತ ಕ್ಷಯವನ್ನು ತಪ್ಪಿಸುವುದು ಹೇಗೆ ? ಅದು ಸಾಧ್ಯವೇ ಇಲ್ಲ. ಇನ್ನೆಷ್ಟು ದಿನಗಳೋ ಆ ಪುಣ್ಯಾತ್ಮರಿಗೆ! ಮೃತ್ಯು ಬರುವುದೆಂದು ಹಿಗ್ಗಿ ಕುಣಿಯುತ್ತಿರಬಹುದು. ಆದರೆ ಅಜಿತ, ಅವಳೊಬ್ಬಳ ಚಿಂತೆ ನನಗೆ. ಲೀಲಾವತಿ! ಹಾ ಅರಳದ ಮುಗುಳೆ! ನೀನೂ ಕಾಡ್ಗಿಚ್ಚಿಗೆ ಬೀಳಬೇಕಾಗಿ ಬಂತೇ!

**ಅಜೀಮ.**—ವಿನೋದಿನಿ! ಪೌರುಷವನ್ನು ಕುಗ್ಗಿಸುವ ಮಾತುಗಳು ಬೇಡ. ಒಂದೇ ಮಾತಿನಲ್ಲಿ ಹೇಳು ನಾನು ಮಾಡಬೇಕಾದುದನ್ನು.

**ಬೀಬಿ.**—ಒಂದು ವೇಳೆ ಅಘಟಿತಘಟನೆಯಾದರೆ, ಆ ಜಿಂಕೆಯ ಮರಿ ಈ ಧೂರ್ತವ್ಯಾಧರ ಕೈಗೆ ಸಿಕ್ಕಿದರೆ, ಆಕೆಯ ಧರ್ಮವನ್ನು ಕಾಪಾಡು.

**ಅಜೀಮ.**—ಜಾತಿಭ್ರಷ್ಟನಾದರೂ ನನಗೆ ಆ ಪುಣ್ಯವಿರಲಿ!

**ಬೀಬಿ.**—ಆಕೆಯ ಮಾನರಕ್ಷಣೆ ಮಾಡುವ ಸಂದರ್ಭ ಬಂದರೆ, ಆ ಉಪಾಯ, ಈ ಉಪಾಯಗಳೆಂದು ನೋಡಬೇಡ. ನೀತಿ ಅನೀತಿಯೆಂಬ ಗೊಡವೆ ಬೇಡ. ಆಕೆಯ ಸ್ತ್ರೀಧರ್ಮವನ್ನುಳಿಸು.

**ಅಜೀಮ.**—ಇದೇ ನನ್ನ ಪ್ರತಿಜ್ಞೆಯೆಂದೆಣಿಸಿಕೊ!

**ಬೀಬಿ.**—ನನ್ನಂತೆಯೇ ಹೆಣ್ಣು; ರಾಜಪುತ್ರಿಯಾಗಿದ್ದಾಳೆ. ಹಾಗೆಯೇ ಇರಲಿ ಸಾಯುವ ವರೆಗೆ. ಹಾ ಲೀಲಾವತಿ! ನಿನಗಾಗಿ ಸುರಿಯುತ್ತಿದೆ ಕಣ್ಣೀರು. ಇದು ಧರ್ಮಚ್ಯುತೆಯ ಕಣ್ಣೀರು. ಆದರೂ ಬಿಸಿಬಿಸಿಯಾದ ಕಣ್ಣೀರು ಲೀಲಾವತಿ. ಪಶ್ಚಾತ್ತಾಪದಿಂದ ಮತ್ತಷ್ಟು ಕುದಿಯುವ ಕಣ್ಣೀರು!

**ಅಜೀಮ.**—ಬೀಬಿ! ಅಲ್ಲ; ವಿನೋದಿನಿ! ನಾನು ಬಂದ ಕೆಲಸ ವಾಯಿತು. ನಮ್ಮ ಅಪಮಾನದ ಕಥೆಯನ್ನು ಕೇಳಲಾರೆನು ಸಹೋದರಿ! ಈ ತಾಯಿಗೆ ಯೋಗ್ಯ ಸಂಸ್ಕಾರಗಳನ್ನು ಮಾಡಿಸು. ಅಥವಾ ಶ್ವಾಸ ವಾರಿದ ದೇಹ; ಇದಕ್ಕೆ ಇನ್ನಾವ ಉಪಚಾರಬೇಕು. ಜೀವನ್ಮೃತರು ನಾವು. ನಮ್ಮ ಸಂಸ್ಕಾರಗಳನ್ನು ನಾವೇ ಮಾಡಿಕೊಳ್ಳೋಣ!

**ಬೀಬಿ.**—ಅಜಿತ! ನಿನ್ನನ್ನು ಇನ್ನೆಂದು ಕಾಣುವುದು?

**ಅಜೀಮ.**—ಈ ಸ್ಥಿತಿಯಲ್ಲಿ ಕಾಣುವ ಹಾಗಿಲ್ಲ ವಿನೋದಿನಿ!

**ಬೀಬಿ** (ಕಣ್ಣೀರು ತುಂಬಿ).—ಸಹೋದರ! ಹೌದು; ನನಗೆ ಬೇರೆ ಸಹೋದರರಿಲ್ಲ. ಆ ಹೆಸರನ್ನುಚ್ಚರಿಸಲು ನಾಲಗೆ ತವಕಗೊಳ್ಳುತ್ತದೆ. ಸಹೋದರ! ಈ ವಿನೋದಿನಿಯ ಸಮಾಚಾರ ಗುಪ್ತವಾಗಿರಲಿ!

**ಅಜೀಮ.**—ಪ್ರತೀಕಾರ ಮಾಡಲಾರದವರಾಗಿ ಇರುವಾಗ ರಹಸ್ಯವೇ ನಮಗೆ ಶರಣು.

**ಬೀಬಿ.**—ಧರ್ಮಭ್ರಷ್ಟೆಯಾದೆ, ಕುಲಚ್ಯುತೆಯಾದೆ. ನನಗಿನ್ನು ಆಗಬೇಕಾದುದೇನು ಸಹೋದರ? ಈ ಅಪಮಾನದ ಗೂಡಿನಲ್ಲಿ ಕೆಲೆದು ಸಾಯುವ ಹಕ್ಕಿ ನಾನು.

**ಅಜೀಮ** (ಒಂದು ಹಾರವನ್ನು ತೆಗೆದು).—ಸಹೋದರಿ! ಇದು ನನ್ನ ಸ್ಮಾರಕ! ತೆಗೆದುಕೊ.

**ಬೀಬಿ.**— ಬೇಡ ಸಹೋದರ. ಈಗಿನ ಸ್ಥಿತಿಯಲ್ಲಿ ಯಾರಿಗೆ ಯಾರ ಸ್ಮರಣೆಯೂ ಬರಲಾಗದು.

**ಅಜೀಮ.**— ಹಾಗಲ್ಲ; ಕಷ್ಟಕಾಲದಲ್ಲಿ ಸಹಾಯ ಮಾಡುವ ಶಕ್ತಿಯಿದೆ ಈ ಹಾರಕ್ಕೆ! ತೆಗೆದುಕೊ!

**ಬೀಬಿ** (ಕಣ್ಣೀರು ಸುರಿಸುತ್ತಾ).— ಹಾಗೆಯೇ ಆಗಲಿ! (ಎಂದು ತೆಗೆದು ಕೊಳ್ಳುವಳು).

**ಅಜೀಮ.**— ವಿನೋದಿನಿ! ಹೋಗುತ್ತೇನೆ. ಬರುವುದಿಲ್ಲ! ಇದು ನಿಶ್ಚಯವೆಂದು ತಿಳಿ.

(ಹೋಗುವನು.)

**ಬೀಬಿ.**— ಎಲೆ ಹೃದಯವೇ! ನಿನಗೆಷ್ಟು ವಂಚನಸ್ವಭಾವ? ಈತನು ಒಂದೇ ಕರುಳಲ್ಲಿ ಹುಟ್ಟಿದ ತಮ್ಮನೆಂದು ತಿಳಿದು ಅವನು ಕೇಳಿದಾಗ, ಎಲೆ ಹೃದಯವೇ, ನೀನು ಸುಳ್ಳು ಹೇಳಿಸಿದೆ. ಅಂದು ಭ್ರಾತೃಪ್ರೇಮದಿಂದ ಕುದಿಯುತ್ತಿದ್ದೆ. ತಮ್ಮನನ್ನು ಕಂಡಾಗ ಅವಿತುಕೊಂಡೆ! ಈಗ ತಮ್ಮನು ಕಣ್ಮರೆಯಾದಾಗ ಹುಡುಕುವೆ, ರೋದಿಸುವೆ. ಆದರೆ ಈ ಪ್ರಾಣವನ್ನು ಮಾತ್ರ ಹೊಡೆದೋಡಿಸುವುದಿಲ್ಲ!

(ಎಂದು ನೆಲದ ಮೇಲೆ ಮಲಗುವಳು).



# ನಾಲ್ಕನೆಯ ಅಂಕ

## ದೃಶ್ಯ ೧

[ಪ್ರದೋಷಕಾಲ. ಅಹೋರಿನ ಬಹಿರುದ್ಯಾನ. ಸ್ವಲ್ಪದೂರದಲ್ಲಿ ಭವಾನೀ ಮಂದಿರವಿದೆ. ವಿಕ್ರಮ ಸಿಂಹನು ಚಿಂತಾಮಗ್ನನಾಗಿ ಒಂದು ಮರದಡಿಯಲ್ಲಿ ಕುಳಿತಿದ್ದಾನೆ.]

**ವಿಕ್ರಮ.**—ಈ ವಿಶ್ವದಲ್ಲಿಯೇ ಉತ್ಸಾಹ ಶಕ್ತಿಯಿಲ್ಲ. ಇರುತ್ತಿದ್ದರೆ, ಅದರ ಉಸಿರಾದ ಈ ಗಾಳಿಯಲ್ಲಿ ಇಷ್ಟು ಮಾಂದ್ಯವೇಕೆ ? ಒಂದು ಹಕ್ಕಿಯಾದರೂ ಕಿಲಕಿಲ ಧ್ವನಿಯನ್ನು ಮಾಡಬೇಕೇ ? ಪಡುವಣ ದಿಕ್ಕು ಹುಬ್ಬುಗಂಟಿಕ್ಕಿ ಬೆದರಿಸುತ್ತಿದೆ. ಖೇದಕಲ್ಲೋಲಗಳು ಅತ್ತಿತ್ತ ತುಳುಕುತ್ತಿವೆ. ಪ್ರಕೃತಿಯಲ್ಲಿ ಏನೋ ಶಾಂತಿಯಿದೆ. ಆದರೆ ಸ್ವಾಭಾವಿಕವಾದ ಪ್ರಸನ್ನ ಶಾಂತಿಯಲ್ಲ, ಶ್ಮಶಾನದ ರೌದ್ರಶಾಂತಿ. ಸೃಷ್ಟಿಯ ಮೋರೆಯು ಕಂದಿರುವುದು. ಆಕಾಶವು ಸುರಿಸಿದ ಬೆವರು ಈ ಮಂಜು ಹುಲ್ಲ ಮೇಲೆ ಬಿದ್ದಿದೆ. ನಕ್ಷತ್ರವೋ! ಅದು ರೆಪ್ಪೆ ಮುಚ್ಚಿಕೊಂಡು ಕ್ಷೀಣಶಾಂತಿಯನ್ನು ಬೀರುವುದು. ಅಲ್ಲ, ಅದೇ ನಿಶಾದೇವಿಯ ಕೆನ್ನೆಯಲ್ಲಿ ಆರದೆ ನಿಂದ ಅಶ್ರುಬಿಂದು! ಹೃದಯಾಂತರ್ಗತವಾದ ಒಂದು ವೇದನೆಯು ಅಂಗಾಂಗಳನ್ನು ವ್ಯಾಪಿಸಿ ಅವುಗಳನ್ನು ಕಂದಿಸುವಂತೆ, ಈ ಸೃಷ್ಟಿಮಧ್ಯದಲ್ಲಿ ಏನೋ ಒಂದು ಪ್ರಲಯ ವೇದನೆಯಿರುವ ಕಾರಣ ಇಂತಹ ಚೈತನ್ಯನಾಶ. ಏನೋ ಒಂದು ಭಕ್ಷ್ಯವನ್ನು ಸೃಷ್ಟಿಯ ಪಾಕಶಾಲೆಯಲ್ಲಿ ಅಡುತ್ತಿರುವರು. ಉಣ್ಣುವವರಾರೋ ಭಕ್ಷ್ಯವೇನೋ ಯಾರು ಬಲ್ಲರು ? (ಸ್ವಲ್ಪ ಸಮಯ ಚಿಂತಾಮಗ್ನನಾಗಿ) ಎದೆಯೇ! ಜಯಿಸು! ನಿನ್ನ ನಿರುತ್ಸಾಹವನ್ನು ಹೊಡೆದು ಅಪ್ಪಳಿಸು! (ಖಡ್ಗಕ್ಕೆ ಕೈಹಾಕಿ) ಜಾಡ್ಯಸ್ವಭಾವವು ಈ ಅಸಿಧರ್ಮಕ್ಕೆ ವಿರೋಧವಾಗಿದೆ. (ಮತ್ತೆ ಸ್ವಲ್ಪ ಸಮಯ ಸುಮ್ಮನಿದ್ದು) ಹೌದು; ನಾನೊಂದು ತಪ್ಪನ್ನು ಮಾಡಿದೆ. ನಾನು ಲೀಲಾವತಿಯನ್ನು ಪ್ರೀತಿಸಿದುದೇ ತಪ್ಪು. ಅದರ ಪರಿಣಾಮವಾಗಿಯೇ ಹೃದಯವು ಚಂಚಲವಾಗಿದೆ. ಲೋಕದಲ್ಲಿ ಲೀಲಾವತಿಯಂತೆ ಎಷ್ಟು ಸುಂದರಿಯರಿಲ್ಲ! ಈ ರೀತಿ ಭಾವಿಸಲು ಕಲಿತಿದ್ದರೆ ಈ ವಿಷಮಸಂಕಟವು

ಬರುತ್ತಿರಲಿಲ್ಲ. ನಮ್ಮನ್ನು ಬಂಧಿಸುವ ಸಂಕಲೆಯು ಸ್ವರ್ಣದಿಂದ ಮಾಡಿದುದಾಗಿರಲಿ; ಕಬ್ಬಿಣದ್ದಾಗಿರಲಿ; ಬಂಧನವನ್ನು, ತಪ್ಪಿಸಲಾಗುವುದಿಲ್ಲ! ಹಾ! ಲೀಲಾವತಿ! ನನಗೆ ಸ್ವರ್ಣಶೃಂಖಲೆಯಾಗಿ ಪರಿಣಮಿಸಿದೆಯಲ್ಲ! ಕಿತ್ತು ಬಿಡೋಣ, ಎಂದರೆ ಬಂಗಾರ! ಬಿಡದಿರಲೆ, ಬಂಧನ! ನನ್ನ ಆತ್ಮಕ್ಕೆ ಬಂಧನ! ಧರ್ಮಕ್ಕೆ ಬಂಧನ! ಎಂತಹ ಉದಾತ್ತರೂ ತಪ್ಪಿ ಬೀಳುವರು ಇಂತಹ ಸಂದರ್ಭದಲ್ಲಿ! ಲೀಲೆ! ನನ್ನನ್ನು ಕ್ಷಮಿಸುವೆಯಾ ? (ಮತ್ತೂ ಚಿಂತಿಸಿ) ನನ್ನ ಅವಸ್ಥೆ ಹೀಗಾಯಿತು. ಯುದ್ಧೋತ್ಸವ ನಿರೀಕ್ಷಣದಿಂದ ಕುಣಿದು ಹಾರಬೇಕಾದ ಎದೆ ಸುರುಟಿಮುರುಟಿ ಬಿದ್ದಿದೆ. (ಮತ್ತೂ ಸ್ವಲ್ಪ ಮೌನದಲ್ಲಿದ್ದು) ನಾನು ವೀರ! ಪ್ರೀತಿಸಿದರೇನಾಯಿತು? ವೀರತ್ವವೆಂಬುದು ಬೆಂಕಿ; ಪ್ರೇಮವೆಂದರೆ ಅದನ್ನು ಧಗಧಗನೆ ಉರಿಯಿಸುವ ಗಾಳಿ. ಅವೆರಡರ ಸಂಯೋಗದಿಂದ ಎಂತಹ ಪವಿತ್ರಯಜ್ಞವಾಗದು ? ಲೀಲಾವತಿ! ನಿನ್ನ ವಿಷಯದಲ್ಲಿ ನನಗಿದ್ದ ಪ್ರೇಮವನ್ನು ತಪ್ಪೆಂದು ಹೇಳಿದುದಕ್ಕೆ ಕ್ಷಮೆಯಿರಲಿ! ಅದು ನನ್ನ ಪುಣ್ಯ! ನನ್ನ ಭಾಗ್ಯ! ನನ್ನ ಸಿದ್ಧಿ! ಅದಕ್ಕೆ ಕಾಣಿಕೆಯೇನು? ರಕ್ತವೇ? ಭವಾನಿ! ಅದನ್ನು ಚೆಲ್ಲುವೆನು. ನನ್ನ ಶಿರಸ್ಸನ್ನು ಪಾದಮೂಲದಲ್ಲಿ ಕೆಡಹುವೆನು. ಮುಖದಲ್ಲಿ ನಗೆಯು ಅರಳುತ್ತಿರುವಾಗ ಅದರ ಎಸಳ ನಡುವಿನಿಂದ ರಕ್ತವು ಮಕರಂದ ನಿರ್ಝರದಂತೆ ಹರಿಯುವುದು. ಇಂತಹ ಶಿರಸ್ಸು ನಿನಗೆ ಉತ್ತಮವಾದ ಕಾಣಿಕೆಯಲ್ಲವೇ ? ಮಹಾದೇವಿ! ತ್ರಿಲೋಕಜನನಿ! ಸಂತುಷ್ಟೆಯಾಗು.

[ಶಂಖಧ್ವನಿಯಾಗುವುದು.]

**ವಿಕ್ರಮ.**— ಪೂಜೆ ಮುಗಿಯಿತು. ಈ ದಾರಿಯಲ್ಲಿಯೇ ಬರುತ್ತಾಳೆ!

[ಪಟ್ಟಿಯನ್ನು ಸರಿಯಾಗಿ ಬಿಗಿದು ಮುಂಡಾಸನ್ನು ತಿದ್ದಿಕೊಂಡು ನಿಲ್ಲುತ್ತಾನೆ. ಲೀಲಾವತಿ ಪುಷ್ಪಪಾತ್ರವನ್ನು ಹಿಡಿದುಕೊಂಡು ಬರುತ್ತಾಳೆ.]

**ಲೀಲಾವತಿ** (ಸಮೀಪಕ್ಕೆ ಬಂದು ನಿಂತು).— ಯಾರದು ಕತ್ತಲೆಯಲ್ಲಿ ?

**ವಿಕ್ರಮ.**— ನಾನು ಕುಮಾರ!

**ಲೀಲಾವತಿ.**— ಯಾರು, ವಿಕ್ರಮ!

**ವಿಕ್ರಮ.**— ಹೌದು, ದೇವಿ!

**ಲೀಲಾವತಿ.**— ಇಲ್ಲಿ ನಿಂತಿರಲು ಕಾರಣವೇನು ?

**ವಿಕ್ರಮ.**—ಪೂಜೆ ತೀರಿಸಿ ನೀನು ಈ ಮಾರ್ಗವಾಗಿ ಬರುವೆಯೆಂದು ಗೊತ್ತಿದ್ದಿತು.

**ಲೀಲಾವತಿ.**—ಹುಂ; ಪೂಜೆ ಮಾಡುವುದಕ್ಕೆ ಹೋಗಿದ್ದೆ. ಈಗ ಬರುತ್ತಿದ್ದೇನೆ.

**ವಿಕ್ರಮ.**—ಹೌದು, ತಾಯಿ! ಈ ದಿವಸಗಳಲ್ಲಿ ಭವಾನಿಯು ಪ್ರಸನ್ನೆಯಾಗಿರಬೇಕು.

**ಲೀಲಾವತಿ.**—ಅದಕ್ಕಾಗಿಯೇ ಪೂಜೆಮಾಡುತ್ತಿದ್ದೇನೆ ಪ್ರತಿ ದಿನ ಸಂಧ್ಯಾ ಸಮಯದಲ್ಲಿ. ಇಂತಹ ಸ್ಥಿತಿ ಬಂದಿದೆ ರಜಪೂತ ನಾರಿಯರಿಗೆ.

**ವಿಕ್ರಮ.**—ಪೂಜೆಮಾಡಿದರೆ ಅಪರಾಧವೇನು ದೇವಿ?

**ಲೀಲಾವತಿ.**—ಪೌರುಷವಿದ್ದು ದೇವ ಪೂಜೆಮಾಡಬೇಕು.

**ವಿಕ್ರಮ.**—ಹಾಗೆಯೇ ಸರಿ.

**ಲೀಲಾವತಿ.**—ರಜಪೂತರಲ್ಲಿ ಅರ್ಧಾಂಶ ಜನರಿಗೆ ಅಂತಹ ಪುರುಷತ್ವವಿಲ್ಲ. ಆದುದರಿಂದ ಈಗ ನಮಗೆ ದೈವದಲ್ಲಿ ವಿಶ್ವಾಸ ಹುಟ್ಟಿದೆ!

**ವಿಕ್ರಮ.**—ಹಾಗಾದರೆ ದೈವ ವಿಶ್ವಾಸವು ಅಬಲರಿಗೆ ಮಾತ್ರ!

**ಲೀಲಾವತಿ.**—ಅಬಲೆಯರಾಗಿ ಹುಟ್ಟಿದವರಿಗೆ ಯಾವುದಾದರೊಂದು ವಿಶ್ವಾಸಭೂಮಿ ಇರಬೇಕಲ್ಲವೇ ?

**ವಿಕ್ರಮ.**—ಈ ಖಡ್ಗದಲ್ಲಿ ನಂಬಿಕೆ ಇಡು, ರಾಜಕುಮಾರಿ!

**ಲೀಲಾವತಿ.**—ಖಡ್ಗದಲ್ಲಿ ವಿಶ್ವಾಸವಿರಿಸುವ ಆ ಕಾಲವು ಸಂದುಹೋಯಿತು.

**ವಿಕ್ರಮ.**—ಅಪ್ಪಣೆಕೊಡು, ಲೀಲಾವತಿ!

**ಲೀಲಾವತಿ.**—ಕೊಡುವುದೇನು? 'ಅಪ್ಪಣೆ ಕೊಡು' ಎನ್ನುವ ಮಾತಿನಲ್ಲಿ ಭೀರುತ್ವವೇ ಧ್ವನಿಸುತ್ತದೆ.

**ವಿಕ್ರಮ.**—ಇಂದು ಶತ್ರುರಕ್ತವನ್ನು ಇದು ಸ್ವೇಚ್ಛೆಯಿಂದ ಕುಡಿಯುವುದು

**ಲೀಲಾವತಿ.**—ಇದು ಹುರುಳಿಲ್ಲದ ಮಾತು, ವಿಕ್ರಮ!

**ವಿಕ್ರಮ.** — ರಕ್ತವನ್ನು ಎಂದೋ ಕುಡಿಯ ಬೇಕಿತ್ತು, ಇದು ವರೆಗೆ ಪ್ರಾಣ ಭೀತಿ.

**ವಿಕ್ರಮ.** — ಹಾಗೆನ್ನ ಬಾರದು, ದೇವಿ.

**ಲೀಲಾವತಿ.** — ರಜಪೂತರಿಗಿದು ನಾಚಿಕೆಗೇಡು.

**ವಿಕ್ರಮ.** — ಯಾವುದು ?

**ಲೀಲಾವತಿ.** — ನಿನಗೆ ತಿಳಿಯುವುದಿಲ್ಲವೇ?

**ವಿಕ್ರಮ.** — ಏನು ದೇವಿ ಪರ್ವತಸಿಂಗನು ಶಹನಿಗೆ ಕೊಟ್ಟ ಮಾತು ಸತ್ಯವೆಂದು ಭಾವಿಸಿದೆಯಾ?

**ಲೀಲಾವತಿ.** — ಸತ್ಯವಾಗಿರಲಿ; ಅಸತ್ಯವಾಗಿರಲಿ; ನಮಗೆ ಆ ವಿಚಾರಬೇಡ. ರಜಪೂತರಿಂದು ಪೌರುಷಹೀನರು.

**ವಿಕ್ರಮ.** — ಹಾಗೆ ಹೇಳಬಾರದು, ದೇವಿ.

**ಲೀಲಾವತಿ.** — ಒಂದು ವೇಳೆ ಸುಳ್ಳೆಂದೇ ಭಾವಿಸು. ಇದರಿಂದ ರಜಪೂತರ ಕೀರ್ತಿ ದಿಗಂತದಲ್ಲಿ ಬೆಳಗಲಾರದು.

**ವಿಕ್ರಮ.** — ಇದು ರಾಜಕೀಯ ವಿಷಯ.

**ಲೀಲಾವತಿ.** — ಸುಳ್ಳು ಹೇಳಿ ಪ್ರಾಣವನ್ನುಳಿಸಿಕೊಳ್ಳುವ ಹಂಚಿಕೆಯೂ ರಾಜ ನೀತಿಯೇ ಸರಿ!

**ವಿಕ್ರಮ.** — ಐದು ಸಾವಿರ ಮಂದಿ ಯೋದ್ಧರು ಹಸಿದ ಹೆಬ್ಬುಲಿಗಳಂತೆ ಗರ್ಜಿಸುತ್ತಿದ್ದಾರೆ. ಇದು ಯಾರಿಗೆ ಬೇಕಾಗಿ?

**ಲೀಲಾವತಿ.** — ಪೌರುಷಹೀನ ಗರ್ಜನೆ! ಸ್ತ್ರೀಯೊಬ್ಬಳ ಮಾನವನ್ನು ಮಾರಿ, ಮಾಡುವ ಗರ್ಜನೆ.

**ವಿಕ್ರಮ.** — ಇದೆಂತಹ ಮಾತು, ಲೀಲೆ ?

**ಲೀಲಾವತಿ.** — ಶಹನ ಕಡೆಯಿಂದ ಆ ಗೊಡ್ಡು ಬ್ರಾಹ್ಮಣ ಬಂದು, ನಿಮ್ಮ ಹುಡುಗಿಯನ್ನು ಕೊಡಿರೆಂದು ಕೇಳಿದಾಗ ಗರ್ಜಿಸದವುಗಳು ಹುಲಿಗಳಲ್ಲ.

**ವಿಕ್ರಮ.** — ಇಂದು ಅದಕ್ಕೆ ಪ್ರಾಯಶ್ಚಿತ್ತವಾಗುವುದು.

**ಲೀಲಾವತಿ.**—ಇಲ್ಲ ವಿಕ್ರಮ; ಇದಕ್ಕೆ ಪ್ರಾಯಶ್ಚಿತ್ತವಿಲ್ಲ. ಅಪ ಮಾನವು ಆತ್ಮಕ್ಕೆ ತಾಗಿ ರಕ್ತವನ್ನು ಹರಿಯಿಸಿದೆ. ಸತ್ತರೂ ಈ ನೋವು ಆರದು. ಅಂದೇ ಮೂರು ತಿಂಗಳ ಹಿಂದೆಯೇ ಶಹನ ಮೇಲೆ ಹಸಿದು ಬೀಳಬೇಕಿತ್ತು. ನೀವು ಹಾಗೆ ಮಾಡಿರಲಿಲ್ಲ. ರಾಜಕಾರಣವೆಂದಿರಿ, ಉಪಾಯವೆಂದಿರಿ, ಮೂರು ತಿಂಗಳ ಆಯುಸ್ಸಿಗಾಗಿ 'ಲೀಲೆಯನ್ನು ಕೊಡುತ್ತೇವೆ'ಂದು ಅಪವಿತ್ರ ಮಾಡಿದಿರಿ ಅಬಲೆಯರ ಪುಣ್ಯ ಕೀರ್ತಿಯನ್ನು. ಬದುಕಿರಿ ವಿಕ್ರಮ! ನೀವೂ ಬದುಕಿರಿ; ರಾಜ ಕಾರಣವೂ ಬದುಕಲಿ! ಮೂರು ತಿಂಗಳಲ್ಲ; ಆಚಂದ್ರಾರ್ಕಸ್ಥಾಯಿಯಾಗಲಿ ನಿಮ್ಮ ಜೀವನ! ಆದರೆ ಅಬಲೆಗೆ ಮಾನರಕ್ಷಣೆಯ ಉಪಾಯವು ತಿಳಿದಿದೆ. ಅದು ನಿಮ್ಮಂತಹವರ ನಿಷ್ಠುರ ಹೃದಯದಲ್ಲಿ ಮೂಡುವ ಭಾವನೆಯಲ್ಲ. ಲೀಲೆಯ ಹೆಸರನ್ನು ಒತ್ತೆಯಿಟ್ಟಿರಿ! ಮೂರು ತಿಂಗಳು ಬದುಕಿದಿರಿ. ನಾಳೆ ನಾನೇ ಹೊರಡುತ್ತೇನೆ ಯುದ್ಧ ಭೂಮಿಗೆ. ನೀವು ರಾಜ ಕಾರಣವನ್ನು ಬದುಕಿಸುತ್ತೀರಿ. ಆದರೆ ಈ ಲೀಲಾವತಿ ಹೋದಳು, ಅವಳ ಮಾನ ಅಂದೇ ಹೋಗಿದ್ದಿತು. ನಾಳೆ ಅವಳ ದೇಹಕ್ಕೂ ಊರ್ಧ್ವದೈಹಿಕವಾಗುವುದು. ವಿಕ್ರಮ! ನಿಮ್ಮ ಖಡ್ಗಗಳು ಒರೆಸೇರಲಿ! ನಿಮಗೆ ಶುಭವಾಗಲಿ!

**ವಿಕ್ರಮ.**—ಲೀಲಾವತಿ! ಎಂತಹ ಬಿರುಮಾತು!

**ಲೀಲಾವತಿ.**—ನಿಮ್ಮ ನಡತೆ ಅದಕ್ಕಿಂತಲೂ ಬಿರುಸೆಂಬುದನ್ನು ಮರೆತೆ.

**ವಿಕ್ರಮ.**—ನಿನ್ನ ಖಡ್ಗವನ್ನು ನನಗೊಪ್ಪಿಸು.

**ಲೀಲಾವತಿ.**—ವಿಕ್ರಮ! ಇದು ನನ್ನ ಕಣ್ಣೀರಲ್ಲಿ ಮಿಂದ ಖಡ್ಗ, ಸತೀಧರ್ಮದಿಂದ ಬೆಂದ ಖಡ್ಗ. ನನ್ನ ಕೂರ್ಮೆಯಿಂದ ಹರಿತವಾದ ಖಡ್ಗ, ಕ್ಷಾತ್ರತೇಜಸ್ಸಿನಿಂದ ತಳತಳಿಸುವ ಖಡ್ಗ. ಯಾರ ಕೈಗೊಪ್ಪಿಸಲಿ ಇದನ್ನು ? ಕ್ಷತ್ರಿಯ ಶೂನ್ಯವಾದ ಪ್ರಪಂಚವಿದು.

**ವಿಕ್ರಮ.**—ಅನುಗ್ರಹಿಸು ದೇವಿ.

**ಲೀಲಾವತಿ.**—ನೀನು ವೀರನೆಂಬುದು ನಿಜವೇ ?

**ವಿಕ್ರಮ.**—ತಮ್ಮ ಗುಣವನ್ನು ಅನ್ಯರು ಕೊಂಡಾಡಬೇಕು.

**ಲೀಲಾವತಿ.**—ಈ ಖಡ್ಗವು ನನ್ನ ಪ್ರಣಯ ಜ್ವಾಲೆ!

**ವಿಕ್ರಮ.**—ಆದುದರಿಂದಲೇ ಅಹಮ್ಮದ್ ಶಹನ ಪ್ರಲಯ ಜ್ವಾಲೆ.!

**ಲೀಲಾವತಿ.**—ನನ್ನ ಅಭಿಮಾನಕ್ಷತಿಯನ್ನು ನೆನೆದು ಎಂದಾದರೂ ನೊಂದಿರುವೆಯಾ ನೀನು ?

**ವಿಕ್ರಮ.**—ದೇವಿ, ನಾನು ರಾಜಸೇವಕನೆಂಬುದನ್ನು ಮರೆತೆ.

**ಲೀಲಾವತಿ.**—ಇಷ್ಟನ್ನೇ ಕೇಳುತ್ತೇನೆ.—ರಾಜನು ಬ್ರಾಹ್ಮಣನಿಗೆ ಮಾತು ಕೊಟ್ಟಾಗ ನಿನಗೆ ಸ್ವಲ್ಪವೂ ವ್ಯಸನವಾಗಲಿಲ್ಲವೇ ?

**ವಿಕ್ರಮ.**—ದೇವಿ! ದೇಹವು ಜ್ವಾಲಾಮುಖಿಯಂತೆ ಸ್ಫೋಟಿಸುತ್ತಿದ್ದಿತು. ಆದರೆ ಮಾಡುವುದೇನು? ರಾಜಸೇವಕ ನಾನು.

**ಲೀಲಾವತಿ.**—ನಿನಗೆ ಪಶ್ಚಾತ್ತಾಪವಿದೆಯೇ ?

**ವಿಕ್ರಮ.**—ಹೌದು; ಪಶ್ಚಾತ್ತಾಪವೇ ಈ ಸ್ಥಿತಿಗೆ ತಂದಿದೆ.

**ಲೀಲಾವತಿ.**—ಹಾಗಾದರೆ ನಿನ್ನಲ್ಲಿ ಸ್ವಲ್ಪವಾದರೂ ಪೌರುಷವುಂಟು?

**ವಿಕ್ರಮ.**—ಪ್ರತಿಜ್ಞೆ ಮಾಡಬೇಕೇ ದೇವಿ?

**ಲೀಲಾವತಿ.**—ಈ ಜೀವವನ್ನೂ ಈ ಖಡ್ಗವನ್ನೂ ಸ್ತ್ರೀಯ ಮಾನರಕ್ಷಣೆಗೆ ನಿಾಸಲಾಗರಿಸಿರುವೆನೆಂದು ಆಣೆಕೊಡು.

**ವಿಕ್ರಮ.**—ದೇವಿ! ಈ ಮಹಾಕಾಲಿಯ ಸನ್ನಿಧಿಯಲ್ಲಿ ಪ್ರತಿಜ್ಞೆ ಮಾಡುತ್ತೇನೆ.

**ಲೀಲಾವತಿ.**—ಆಗಲಿ; ನೀನೊಬ್ಬನಾದರೂ ಕ್ಷತ್ರಿಯನಾಗಿರುವೆ. ಕ್ಷತ್ರಧರ್ಮಕ್ಕೆ ಬರಸಿಡಿಲು ಬೀಳಲಿಲ್ಲ.

**ವಿಕ್ರಮ.**—ಕುಮಾರಿ! ನಾನಿನ್ನು ಹೋಗಬೇಕು.

**ಲೀಲಾವತಿ.**—ಇಂದಿಗೆ ಮೂರು ತಿಂಗಳಾಯಿತು ವಿಕ್ರಮ! ಪ್ರತಿಸಂಧ್ಯೆಯಲ್ಲಿಯೂ ಭವಾನಿಯನ್ನು ಅರ್ಚಿಸುತ್ತಿದ್ದೇನೆ. ಮುಸ್ಸಂಜೆಯಲ್ಲಿ ಪಕ್ಕಿಗಳು ಗೂಡಿಗೆ ಹಾರುವಾಗ ಪಡುವಣ ದಿಕ್ಕು ರಕ್ತವರ್ಣದಿಂದ ಕಂಗೊಳಿಸುವಾಗ, ಎಲ್ಲಾದರೊಬ್ಬ ವೀರನಿರುವನೋ ಎಂದು ಅರಸುತ್ತಿದ್ದೆ. ಎಷ್ಟೋ ಸಂಜೆಗಳು ಹೀಗೆಯೇ ಕಳೆದು ಹೋಗಿವೆ. ಆದರೆ ಇಷ್ಟಾರ್ಥವು ನೆರವೇರಿರಲಿಲ್ಲ. ಇಂದು ನಿರಾಶೆಯಿಂದ ಎರಡು ಗಳಿಗೆ ಭವಾನಿಯ ಮುಂದೆ ಧ್ಯಾನಮಗ್ನೆಯಾಗಿ ಕುಳಿತಾಗ, ನಿನ್ನ ರೂಪವು ಹೃದಯಗೋಚರ

ವಾಯಿತು. ಕಣ್ಣೀರು ತಾನಾಗಿ ಸುರಿಯಿತು. ಅದೇ ಕಣ್ಣೀರನ್ನು ತೊಡೆದು ಹೊರಬರುತ್ತೇನೆ; ನಿನ್ನ ದರ್ಶನವಾಯಿತು ವಿಕ್ರಮ. ಕಣ್ಣೀರಿನ ಗೆಳೆಯ ನೀನು. ಸ್ತ್ರೀಧರ್ಮವು ಪಾಲಿತವಾಗಲಿ! ಭವಾನಿಯ ಸಂಕೇತವಿದು. ಈ ಖಡ್ಗವನ್ನು ತೆಗೆದುಕೊ!

**ವಿಕ್ರಮ.**—ಈ ಖಡ್ಗಧಾರಣ ಮಾಡುವ ಶಕ್ತಿಯನ್ನು ಕೊಡು, ಭವಾನಿ! (ಎಂದು ಸ್ವೀಕಾರ ಮಾಡುವನು).

[ಅಷ್ಟರಲ್ಲಿ ದಾಸಿಯೊಬ್ಬಳು ಕುಮಾರಿಯನ್ನು ಕರೆಯುವಳು]

**ಲೀಲಾವತಿ.**—ಇಂದು ಹೃದಯವು ನಿಶ್ಶಂಕವಾಯಿತು. ಇನ್ನು ಸುಖವಾಗಿ ಸಾಯಬಹುದು. ಶರತ್ಕಾಲದ ಮೋಡದಂತೆ ಯಾರಿಗೂ ತೋರದ ಆಕಾಶ ವಿವರದಲ್ಲಿ ಸುಖದಿಂದ ಲೀನೆಯಾಗ ಬಹುದು, ವಿಕ್ರಮ! ಧರ್ಮವೀರನೇ! ಯುದ್ಧಕ್ಕೆ ತೆರಳು. ಈ ಖಡ್ಗವು ನನ್ನ ಹೃದಯದ ಸಾಕ್ಷಿಯಾಗಿ ನಿನ್ನ ಕೈಯಲ್ಲಿರುವುದು. ನಿನ್ನ ಜಯದಲ್ಲಿ ಹಿಗ್ಗುವುದು, ಅಪಜಯವಾದಲ್ಲಿ ಧರ್ಮವೀರನಿಗೆ ಪರತ್ರೆಯಲ್ಲಿ ಸದ್ಗತಿ ದೊರೆಯಲೆಂದು ಹರಸುವುದು. ಹೋಗು ವಿಕ್ರಮ; ರಣದುಂದುಭಿಯು ಕರೆಯುತ್ತಿದೆ. ಹೃದಯ ಸಮೀಪವರ್ತಿಯೇ! ಹೋಗು; ಮಾಂಸ ಚಕ್ಷುವಿಗೆ ಗೋಚರಿಸದಿದ್ದರೂ ಹೃದಯ ಚಕ್ಷುವಿನಿಂದ ತಪ್ಪಿಸಲಾರೆ. (ಸ್ವಲ್ಪ ಮುಂದೆ ಹೋಗಿ ಹಿಂದೆ ಬಂದು) ಇದು ಬಹುಶಃ ಕೊನೆಯ ದರ್ಶನವಾಗಿರಬಹುದು. ಆದರೂ ನನ್ನ ನಿನ್ನ ಹೃದಯ ಸಂಬಂಧಕ್ಕೆ ಅಡ್ಡ ಬರುವ ವಿಘ್ನವಿಲ್ಲ. (ಎಂದು ತೆರಳುವಳು).

**ವಿಕ್ರಮ.**—ಇದು ವರೆಗೆ ನಾನು ಜೀವ ಹಿಡಿದಿದ್ದೆ. ಬದುಕಿರಲಿಲ್ಲ. ಇಂದು ಬದುಕಿದೆ. ಏಕೆಂದರೆ ಜೀವನಕ್ಕೆ ಹೊಸಕಳೆ ಇಂದು ದೊರೆತಂತಾಗಿದೆ. (ಸ್ವಲ್ಪ ಸಮಯ ಮೌನವಾಗಿದ್ದು) ಎಂತಹ ಸ್ತ್ರೀರೂಪ! ಇವಳ ಆತ್ಮ ತೇಜವೆಷ್ಟು! ಬ್ರಹ್ಮನ ಇಂತಹ ವಿಚಿತ್ರ ರಚನೆಯನ್ನೆಂದಿಗೂ ನೋಡಿರಲಿಲ್ಲ. ಈಕೆಯನ್ನು ನೋಡಿದಷ್ಟು ನೋಡಬೇಕಾದ ಸೌಂದರ್ಯವೇ ಹೆಚ್ಚುತ್ತಿದೆ. ಕಲಿತಷ್ಟೂ ಕಲಿಯ ಬೇಕಾದ ಗುಣಗಳ ಸಂಖ್ಯೆ ಹೆಚ್ಚುತ್ತಿದೆ. ಎಂತಹ ಅಪೂರ್ವಶಕ್ತಿ! ಕುಮಾರಿ! ನನ್ನ ದೇಹವು ನಿನ್ನ ಮಾನ ರಕ್ಷಣೆಗಾಗಿದೆ. ಇದರಿಂದಲೇ ನನಗೆ ಮುಕ್ತಿ ದೊರೆಯಲಿ!

---

## ದೃಶ್ಯ ೨

[ಆಹೋರಿನ ಬೀದಿ; ಇಬ್ಬರು ತಿರುಕುಳಿಗಳು.]

**ಮೊದಲನೆಯುವ.**— ಕೇಳಿದೆಯೊ ಸುದ್ದಿಯುನ್ನು ?

**ಎರಡನೆಯುವ.**— ಏನಪ್ಪ ಅದು ?

**ಮೊದಲನೆಯುವ.**— ಶಹನ ಸೇನೆ! ಎಲ್ಲೆಲ್ಲಿಯುೂ ಸೇನೆ ಶಹನದು!

**ಎರಡನೆಯುವ.**— ಇದನ್ನೆಲ್ಲಾ ಕೇಳುವುದೇನು ? ಹೀಗಾಗ ಬಹುದೆಂದು ಮೊದಲೇ ಗೊತ್ತು.

**ಮೊದಲನೆಯುವ.**— ಹಾಗಾದರೆ ಸಾಯುಬೇಕೆಂದೇ ನಿಂತುದು.

**ಎರಡನೆಯುವ.**— ಹುಂ.

**ಮೊದಲನೆಯುವ.**— ನಿನ್ನ ಜ್ಞಾನ ವ್ಯರ್ಥ.

**ಎರಡನೆಯುವ.**— ಏತರಿಂದ ?

**ಮೊದಲನೆಯುವ.**— ನಿನ್ನ ಹಾಗೆ ನಾನೂ ನಿರೀಕ್ಷಿಸಿದ್ದರೆ, ಏನಾದರೂ ಮಾಡುತ್ತಿದ್ದೆ.

**ಎರಡನೆಯುವ.**— ಏನು ಮಾಡುತ್ತಿದ್ದೆ ?

**ಮೊದಲನೆಯುವ.**— ಯಾರಿಗೂ ತಿಳಿಯುದಂತೆ ಸುರಂಗಮಾರ್ಗದಿಂದಲಾದರೂ ಓಡಿ, ಈ ಮೊದಲೇ ಆಹೋರಿನಿಂದ ನೂರು ಹರದಾರಿ ದೂರದ ಸ್ಥಳಕ್ಕಾದರೂ ಹೋಗುತ್ತಿದ್ದೆ.

**ಎರಡನೆಯುವ.**— ಥೂ ಹೇಡಿ!

**ಮೊದಲನೆಯುವ.**— ಹೇಡಿಯಾದರೆ ಬೇಸರವಿಲ್ಲ; ಈಗ ಮಾತ್ರ ಎಲ್ಲ ತಡವಾಯಿತು.

**ಎರಡನೆಯುವ.**— ಯಾವುದಕ್ಕೆ?

**ಮೊದಲನೆಯುವ.**— ಪಲಾಯುನಕ್ಕೆ.

**ಎರಡನೆಯುವ.**— ಛೀ ಮೂರ್ಖ !

**ಮೊದಲನೆಯುವ.**—ಬಿರುದು ಬಾವಲಿ, ಮತ್ತೆ, ಮೊದಲು ಪ್ರಾಣ ರಕ್ಷಣೆ. ಅಣ್ಣ, ಇನ್ನೇನು ಮಾಡಲಿ ?

**ಎರಡನೆಯುವ.**—ಮಾಡುವುದೇನು ? ಶಹನ ಸೈನ್ಯವು ಹೆಬ್ಬಾವಿನಂತ ಕೋಟೆಯನ್ನು ಸುತ್ತುವರಿದಿದೆ.

**ಮೊದಲನೆಯುವ.**—ಹಾಗಾದರೆ ಗತಿಯೇನು ?

**ಎರಡನೆಯುವ.**—ಮತ್ತೇನು ? ಯುದ್ಧ ಮಾಡುವುದು.

**ಮೊದಲನೆಯುವ.**—ನಮ್ಮಂಥವರ ಯುದ್ಧಕ್ಕೆ ಸಾವು ಎಂದು ಹೆಸರು.

**ಎರಡನೆಯುವ.**—ಹೌದು; ಅದೇ ಗತಿ.

**ಮೊದಲನೆಯುವ.**—ಹಾಗೆ ಹೇಳ ಬೇಡಣ್ಣ. ಪ್ರಾಯ ಸಣ್ಣದು.

**ಎರಡನೆಯುವ.**—ಸಣ್ಣ ಪ್ರಾಯದವರೇ ಯುದ್ಧಕ್ಕೆ ನೆರವಾಗ ಬೇಕಾದುದು.

**ಒಂದನೆಯುವ.**—ಯುದ್ಧ! ಅದರ ಹೆಸರೆತ್ತ ಬೇಡಣ್ಣ! ಆ ಹೆಸರು ಕೇಳಿದೊಡನೆ ಸಾವಿನ ನೆನಪಾಗುತ್ತದೆ.

**ಎರಡನೆಯುವ.**—ಖಡ್ಗ ಹಿಡಿ! ಕವಚ ತೊಡು!

**ಒಂದನೆಯುವ.**—ಅದೇ ಸಾಯುವವರ ತೊಡಿಗೆ. ನನಗೆ ಚಿಕ್ಕ ಹೆಂಡತಿಯಿದ್ದಾಳೆ.

**ಎರಡನೆಯುವ.**—ನಾಳೆ ಅಂಬೆಗಾಲಿಕ್ಕುವ ಹಸುಗೂಸೂ ಯುದ್ಧಕ್ಕೆ ಹೊರಡುವುದು.

**ಒಂದನೆಯುವ.**—ಶಿಶುಗಳು ಯುದ್ಧಕ್ಕೆ ಹೋದರೆ ಶತ್ರುಗಳು ಕನಿಕರ ಪಟ್ಟಾರು! ಎತ್ತಿ ಮುದ್ದಿಟ್ಟಾರು!! ಆದರೆ ನಮ್ಮನ್ನೊ ?

**ಎರಡನೆಯುವ.**—ಛೀ ಹೇಡಿ! ಎಲ್ಲಾದರೂ ಓಡು. ಎಲ್ಲಿಯಾದರೂ ನರಿನಾಯಿಗಳೊಂದಿಗೆ ತಲೆ ಮರಸಿಕೊ!

**ಒಂದನೆಯುವ.**—ಈ ಮನುಷ್ಯ ರೂಪನ್ನು ಮಾಡುವುದೇನು ?

(ಅಷ್ಟರಲ್ಲಿ ಅನಾಹುತ! ಅನಾಹುತ!! ಎಂದು ಬೊಬ್ಬಿರಿದು ಒಬ್ಬನು ಓಡಿಬರುವನು)

**ಮೊದಲನೆಯುವ.**—ಏನಯ್ಯ, ಪಲಾಯನ ಮಾಡಬೇಕೇ?

**ಮೂರನೆಯವ.**—ಸುಲ್ತಾನನ ಸೈನ್ಯ. ಅವನ ಬಾವಟೆ; ಅವನ ಅರ್ಧಚಂದ್ರ.

**ಮೊದಲನೆಯವ.**—ಎಲ್ಲಿ ?

**ಮೂರನೆಯವ.**—ಕೋಟೆಯ ಮುಂದೆ. ಎಲ್ಲೆಲ್ಲಿ ನೋಡಿದರೂ ಸೈನ್ಯ—ಪೂರ್ವದಲ್ಲಿ, ಪಶ್ಚಿಮದಲ್ಲಿ, ಉತ್ತರದಲ್ಲಿ, ದಕ್ಷಿಣದಲ್ಲಿ!

**ಮೊದಲನೆಯವ.**—ನಮ್ಮ ಪಾಡೇನು ?

**ಮತ್ತೊಬ್ಬ.**—ಸಾಯುವುದು.

**ಇನ್ನೊಬ್ಬ.**—ಗೂಡಿನಲ್ಲಿ ಬಿದ್ದ ಇಲಿಯಂತೆ!

**ಮತ್ತೊಬ್ಬ.**—ಕಪ್ಪಿನಲ್ಲಿ ಬಿದ್ದ ನಾಯಿಯಂತೆ!

**ಒಂದನೆಯವ.**—ಸಾಯುವ ಕ್ರಮ ಹೇಗಿದ್ದರೂ ಸಾಯುವುದು ಸಾಯುವುದೇ.

**ಮತ್ತೊಬ್ಬ.**—ಹಾ ನನ್ನಾಕೆ!

**ಇನ್ನೊಬ್ಬ.**—ಹಾ ನನ್ನ ಹಸುಗೂಸೇ!

[ಅಷ್ಟರಲ್ಲಿಬ್ಬರು ಡಂಗುರ ಹೊಯ್ದು ಬರುವರು.]

**ಡಂಗುರದವ.**—ನಾಳೆ ಮುಂಜಾನೆ ಕೋಳಿ ಕೂಗುವ ಮೊದಲೇ ಎಲ್ಲರೂ ಸಶಸ್ತ್ರರಾಗಿ ಅರಮನೆಯ ಮುಂದೆ ಕೂಡಬೇಕು.

**ತಿರುಕ.**—'ಬೇಕು!' ಯಾರ ಅಪ್ಪಣೆ!

**ಡಂಗುರದವ.**—ಹಾಗೆ ರಾಜಾಜ್ಞೆಯಾಗಿದೆ. ಇದನ್ನು ಮೀರಿದವರಿಗೆ ಶೂಲಾರೋಹಣವೇ ಗತಿ!

**ಮೊದಲನೆಯವ.**—ಅಯ್ಯೋ ದೇವರೇ! ನೀನೂ ಕುರುಡನೇ!

**ಡಂಗುರದವ.**—೧೬ ವಯಸ್ಸಿನ ಕೆಳಗಿನವರು ಮತ್ತು ೫೦ರ ಮೇಲಿನವರು ತಂತಮ್ಮ ಗೃಹಗಳಲ್ಲೇ ಇದ್ದು ಸದ್ಯಕ್ಕೆ ಸ್ತ್ರೀಬಾಲರಸಂರಕ್ಷಣೆಯನ್ನು ಮಾಡಬೇಕು.

[ಢಂ ಢಂ ಢಂ! ಎಂದು ಡಂಗುರ ಹೊಡೆಯುವನು.]

**ಮೊದಲನೆಯವ.**—ನನ್ನ ವಯಸ್ಸು ನನಗೆ ವಿರೋಧ ಮಾಡಿತು.

**ಡಂಗುರದವ.**—ತಪ್ಪಿದರೆ ತಲೆ ಹೋದೀತು. ಒಪ್ಪಿದರೆ ರಜಪೂತರ ಮಾನ ಉಳಿದೀತು!

(ಢಂ! ಢಂ! ಢಂ!!)

**ಒಬ್ಬೊಬ್ಬ.**—ಅಯ್ಯೋ! ರಜಪೂತನಾಗಿ ಏಕೆ ಹುಟ್ಟಿದೆ ?

**ಮತ್ತೊಬ್ಬ.**—ಆಹೋರಿನೊಳಗೆ ಏಕೆ ಜನ್ಮ ತಾಳಿದೆ ?

**ಎರಡನೆಯವ.**—ಒದರಿ ಫಲವಿಲ್ಲ.

**ಮತ್ತೊಬ್ಬ.**—ಹೌದು; ಯುದ್ಧಕ್ಕೆ ಒಪ್ಪಿದರೆ ಯುದ್ಧದಲ್ಲಿ ಸಾಯುವವರೆಗೆ ಬದುಕಬಹುದು.

**ಇನ್ನೊಬ್ಬ.**—ಇಲ್ಲವಾದರೆ ಈಗಲೇ.

**ಮತ್ತೊಬ್ಬ.**—ಈ ಎರಡರಲ್ಲಿ ಯುದ್ಧಮಾಡಿ ಸಾಯುವುದೇ ಲೇಸು!

(ಭಟರು ಡಂಗುರ ಹೊಡೆಯುತ್ತಾ ಹೋಗುವರು.)

## ದೃಶ್ಯ ೩

[ಆಸ್ಥಾನ ಮಂಟಪ. ಪರ್ವತಸಿಂಗ, ರಾಮಸಿಂಗ ಇಬ್ಬರೇ ಇರುವರು]

**ಪರ್ವತಸಿಂಗ.**—ಮೂರು ತಿಂಗಳ ಅವಧಿ ಮುಗಿಯಿತು; ಇಂದು ಕೊನೆಯ ದಿನ. ದೇಹರಕ್ಷಣೆಯೋ ಮಾನರಕ್ಷಣೆಯೋ ನಿಶ್ಚಯಿಸ ಬೇಕಾದ ದಿನವಿಂದು.

**ರಾಮಸಿಂಗ.**— ಸರ್ವವೂ ನಾಶವಾಗಲಿ; ಅದರೊಂದಿಗೆ ರಜಪೂತರ ಅಪಕೀರ್ತಿಯೂ ಸುಟ್ಟು ಭಸ್ಮವಾಗಲಿ!

**ಪರ್ವತಸಿಂಗ.**—ಜೀವನದ ಆಶೆಯು ದಡದಲ್ಲಿ ಕುಳಿತು ಆಡುವ ಮಾತಿದು.

**ರಾಮಸಿಂಗ.**— ಹೌದು ಪ್ರಭು! ತೇಲುವಷ್ಟು ತೇಲಿದೆವು; ಮುಳುಗುವಷ್ಟು ಮುಳುಗಿದೆವು.

**ಪರ್ವತಸಿಂಗ.**—ಒಬ್ಬನ ಇಚ್ಛೆಯಂತೆ ಹಲವು ಜೀವನಗಳಿಗೆ ಸಂಚಕಾರ ಕೊಡುವುದೇ ?

**ರಾಮಸಿಂಗ.**— ಈ ವಿಷಯವನ್ನು ವಿಚಾರಿಸುವಾಗ ಆಹೋರಿನಲ್ಲಿ ಹಲವು ಜನರಿಲ್ಲ; ಒಬ್ಬನೇ ಇರುವನು.

**ಪರ್ವತಸಿಂಗ.**— ಹಾಗೆ ನೀನು ಭಾವಿಸಬಹುದು.

**ರಾಮಸಿಂಗ.**— ಹೃದಯತಲದಲ್ಲಿ ಅಡಗಿದ ಪಶ್ಚಾತ್ತಾಪವೋ ಇತರ ಭಾವನೆಗಳೋ ಮೂಡುವ ಕಾಲವಿದು.

**ರಾಮಸಿಂಗ.**— ಈ ಮೂರು ತಿಂಗಳಲ್ಲಿ ಎಲ್ಲರಿಗೂ ಮೃತ್ಯುವಿನ ಪರಿಚಯವಾಗಿದೆ. ಆದುದರಿಂದ ಪಶ್ಚಾತ್ತಾಪಕ್ಕೆ ಕಾರಣವಿಲ್ಲ.

**ಪರ್ವತಸಿಂಗ.**— ಆದರೂ ಹೇಳುತ್ತೇನೆ 'ಆಲೋಚಿಸಿರಿ, ಆಲೋಚಿಸಿರಿ' ಎಂದು.

**ರಾಮಸಿಂಗ.**— ಆಲೋಚನೆಯ ಫಲವೇ ಇದು ಪ್ರಭು!

**ಪರ್ವತಸಿಂಗ.**—ಆಗಿರಬಹುದು. ಆದರೂ ಮುಪ್ಪಿನ ಹಣ್ಣು ಬುದ್ಧಿ ಪದೇಪದೇ ಎಚ್ಚರಿಸುತ್ತಿದೆ 'ಆಲೋಚನೆ ಮಾಡಿರಿ, ವಿಚಾರಿಸಿರಿ.' ಎಂದು.

**ರಾಮುಸಿಂಗ.**—ರಜಪೂತರ ವ್ಯವಹಾರದಲ್ಲಿ ಎರಡು ವಿಭಾಗಗಳಿವೆ. ಒಂದು ಆಲೋಚನೆಯ ಕ್ಷೇತ್ರ. ಇನ್ನೊಂದು ವಿಚಾರಕ್ಕೆ ಎಡೆಯಿಲ್ಲದ ಕ್ಷೇತ್ರ. ಮಾನವುಳಿಸುವುದು ಈ ವಿಭಾಗಕ್ಕೆ ಸೇರಿದೆ.

**ಪರ್ವತಸಿಂಗ.**—ಬರಿಯ ಮಾನರಕ್ಷಣೆಯಾದರೆ ಸರಿ. ಆದರೆ ಮರಣದೊಡನೆ ಹುಟ್ಟುವ ಮಾನವಿದು. ಅದನ್ನು ಕಾಪಾಡುವಾಗ ವಿಚಾರ ಬೇಕೆಂದು ಹೇಳಿದೆನು.

**ರಾಮುಸಿಂಗ.**—ಸುಲಭವಾಗಿ ಮಾನರಕ್ಷಣೆ ಮಾಡುವುದು ಯಾವ ವ್ಯವಹಾರ ನೀತಿಯಲ್ಲಿಯೂ ಸೇರಲಿಲ್ಲ, ಪ್ರಭು.

**ಪರ್ವತಸಿಂಗ.**—'ಮಾನ' 'ಮಾನ' ಎಂದು ಪದೇಪದೇ ಹೇಳುವೆಯಲ್ಲ. ಅದಕ್ಕೆ ಎಷ್ಟು ಬೆಲೆ ?

**ರಾಮುಸಿಂಗ.**—ಎಷ್ಟಾದರೂ ದೊಡ್ಡದಲ್ಲ.

**ಪರ್ವತಸಿಂಗ**—ನಿನಗೆ ಪ್ರಾಣಭಯವಿಲ್ಲ; ಉಳಿದವರಿಗೆ ?

**ರಾಮುಸಿಂಗ.**—ನನ್ನಂತೆ ಇಲ್ಲದವ ರಜಪೂತನೂ ಅಲ್ಲ.

**ಪರ್ವತಸಿಂಗ.**—ಗಂಡುಸರ ಪಾಡು ಹೀಗಾಯಿತು; ಹೆಂಗುಸರನ್ನೇನು ಮಾಡಬೇಕೆನ್ನುವೆ ?

**ರಾಮುಸಿಂಗ.**—ನಾವೇನೂ ಮಾಡಬೇಕಾಗಿಲ್ಲ; ಅವರ ಕರ್ತವ್ಯ ಅವರಿಗೆ ತಿಳಿದಿದೆ.

**ಪರ್ವತಸಿಂಗ.**—ಹಾಗೆಂದರೆ?

**ರಾಮುಸಿಂಗ.**—ವೀರಜನನಿಯರ ಸ್ತನ್ಯಪಾನ ಮಾಡಿದ ಕೂಸುಗಳಿಗೆ ಮರಣದ ಲಲ್ಲೆಹಾಡನ್ನು ಕೇಳಿ ಅನುಭವವಿದೆ.

**ಪರ್ವತಸಿಂಗ.**—ಹುಂ; ಸರ್ವನಾಶವಾಗಬೇಕೆಂಬುದೊಂದೇ ನಿನ್ನ ಸಂಕಲ್ಪ.

**ರಾಮುಸಿಂಗ.**—ಇದು ವಿನಾಶವಲ್ಲ, ತಂದೆ.

**ಪರ್ವತಸಿಂಗ.**—ಎಳಬಳ್ಳಿಗಳನ್ನು ಕಡಿದು ಕಾಡುಗಿಚ್ಚಿಗೆ ಆಹುತಿ ಕೊಡುವುದು!

**ರಾಮಸಿಂಗ.**—ಇದು ಅಂತಹ ಆಹುತಿಯಲ್ಲ. ಮಾನರಕ್ಷಣೆಯ ಪವಿತ್ರ ಯಜ್ಞಕುಂಡದಲ್ಲಿ ಮಾನವತಿಯರ ರಕ್ತಮಾಂಸವನ್ನು ಆಹುತಿ ಕೊಡುವುದು!

**ಪರ್ವತಸಿಂಗ.**—ಅಯ್ಯೋ ನಿನ್ನ ಮಾತೇ! ಬೇರೆ ಮಾತು ಬರುವುದೇ ಇಲ್ಲ!

**ರಾಮಸಿಂಗ.**—ಬೇರೆ ಕರ್ತವ್ಯವಿಲ್ಲ.

**ಪರ್ವತಸಿಂಗ.**—ಇಂದು ಇಂದ್ರಪುರಿಯಂತಿರುವ ಆಹೋರನ್ನು ಶ್ಮಶಾನವಾಗಿ ಮಾಡುವುದೂ ಕರ್ತವ್ಯ!

**ರಾಮಸಿಂಗ.**—ಆಹೋರು ಕೋಟೆಯೆಂದೇನು? ಲೋಕದಲ್ಲಿ ಎಷ್ಟೋ ಕೋಟೆಗಳು ಎಷ್ಟೋ ವೈಭವಯುಕ್ತ ನಗರದೇಶಗಳು ವಿನಾಶ ಹೊಂದಿವೆ. ಆದರೂ ಲೋಕ ತಿರುಗುತ್ತಿದೆ.

**ಪರ್ವತಸಿಂಗ.**—ಲೋಕದ ಗೊಡವೆ ನಮಗೇಕೆ?

**ರಾಮಸಿಂಗ.**—ಆ ಗೊಡವೆ ಬೇಡ. ಆದರೆ ನಮ್ಮ ಕರ್ತವ್ಯದ ಗೊಡವೆ ಬೇಕಲ್ಲವೇ? ಸಾಯುವುದು, ಎಲ್ಲರೂ ಸಾಯುತ್ತಾರೆ. ಆದರೆ ಸಾಯಬೇಕಾದಂತೆ ಸಾಯುವುದಿಲ್ಲ.

**ಪರ್ವತಸಿಂಗ.**—ಅಯ್ಯೋ! ಮಗನೆ! ನೀನು ಪುನಃ ಪುನಃ ಕರ್ತವ್ಯವನ್ನು ಬೋಧಿಸುತ್ತಿರುವೆಯಲ್ಲಾ. ಈ ಕರ್ತವ್ಯಕ್ಕೆ ಯಾರೂ ಮೇರೆಯನ್ನು ಹಾಕಲಿಲ್ಲವೇ? ಅನಂತಾಕಾಶದಂತೆ ಈ ಕರ್ತವ್ಯಕ್ಕೂ ತುದಿಬುಡವಿಲ್ಲವೇ?

**ರಾಮಸಿಂಗ.**—ಹಾಗೆಯೇ ಸರಿ.

**ಪರ್ವತಸಿಂಗ.**—ರಾಮಸಿಂಗ! ನೀನು ವೀರನೇ ಸರಿ. ಆದರೆ ಮುಪ್ಪಿನ ಅನುಭವ ನಿನಗಿಲ್ಲ. ಆಯುಸ್ಸಿನ ಕೊನೆಯ ಗಳಿಗೆಯಲ್ಲಿ ಇರುವವರಿಗೆ ತಮ್ಮ ಚಿಂತೆಯಿಲ್ಲ. ಪರರ ಚಿಂತೆ. ಅದು ಈ ಮನಸ್ಸನ್ನು ಬುಗರಿಯಂತೆ ತಿರುಗಿಸದೆ ಬಿಡುವುದಿಲ್ಲ, ಮಗು.

**ರಾಮಸಿಂಗ.**—ತಂದೆ! ನಿಮಗಿಷ್ಟು ಅಧೈರ್ಯವೇಕೆ?

**ಪರ್ವತಸಿಂಗ.** — ಸಾಯುವ ಜನರು ಒಬ್ಬೊಬ್ಬರಾಗಿ ಸಾಯುತ್ತಾರೆ. ಅವರವರ ಇಹಲೋಕದ ಕರ್ತವ್ಯವು ಮುಗಿದ ಮೇಲೆ ಯಾರಿಗೂ ಹೇಳದೆ ಸಾಯುತ್ತಾರೆ. ಪ್ರಯಾಣಿಕನು ಬಳಲಿದಲ್ಲಿ ವಿಶ್ರಮಿಸುವನು. ಯಾರಲ್ಲಿಯೂ ಹೇಳದೆ ಕೇಳದೆ ಕುಳಿತು ಬಿಡುತ್ತಾನೆ. ಆದರೆ ಹೀಗೆ

**ರಾಮಸಿಂಗ.** — ಮುಂದೆ ನಡೆಯುವುದು ಅಪಾಯಕರವಾದರೆ.

**ಪರ್ವತಸಿಂಗ.** — ವ್ಯಸನವಿಷ್ಟೆ ರಾಮ! ಕೈಯಲ್ಲಿರುವ ಕಾಸನ್ನೆಲ್ಲಾ ವೆಚ್ಚಮಾಡಿ ಮನೆಯನ್ನು ಸೂರೆಗೊಡುವವನಿಗೆ ಚಿಂತೆಯಿಲ್ಲ. ಆದರೆ ಸಂಪತ್ತನ್ನು ಕೂಡಿಟ್ಟು ಕಾಪಾಡಿ ಅದನ್ನು ಸೂರೆಗೊಡುವುದು ಹೇಗೆ? ನಿಮ್ಮನ್ನು ನೋಡುವಾಗ ಈ ಭಾವನೆಯಾಗುತ್ತಿದೆ ಮನಸ್ಸಿನಲ್ಲಿ.

**ರಾಮಸಿಂಗ.** — ಇಂತಹ ಕೃತ್ಯದಲ್ಲಿ ಪೌರುಷವುಂಟು. ತಂದೆ.

**ಪರ್ವತಸಿಂಗ.** — ಇರಬಹುದು. ನೀವು ಪೌರುಷಹೀನರೆಂದು ಅಥವಾ ಪೌರುಷಹೀನರಾಗಬೇಕೆಂದು ನನ್ನ ಆಸೆಯಲ್ಲ. ಆದರೆ ಈ ಕ್ರೂರಪೌರುಷ ಪ್ರದರ್ಶನವು ನನ್ನ ಕಾಲಾನಂತರ ಆಗುತ್ತಿದ್ದರೆ

**ರಾಮಸಿಂಗ.** — ಸತ್ಪುತ್ರನನ್ನು ಪಡೆದ ಕೃತಾರ್ಥತೆ ಇರುತ್ತಿರಲಿಲ್ಲ.

**ಪರ್ವತಸಿಂಗ.** — ಸತ್ಪುತ್ರನು ಹುಟ್ಟಬೇಕು, ವೀರಪಿತನೆನ್ನಿಸಿಕೊಳ್ಳಬೇಕು, ಎಂಬುದೇ ಪಿತೃಧರ್ಮದ ಉಚ್ಚಧ್ಯೇಯವೆಂಬುದನ್ನು ಬಲ್ಲೆ. ಆದರೆ ಅದರ ಸಾಧನೆಯ ವಿಧಾನ ಬೇರೆ. ಅದು ನಿನಗೆ ತಿಳಿಯದು. ಪಿತೃಹೃದಯವನ್ನು ನೀನು ಕಂಡವನಲ್ಲ ಮಗು.

**ರಾಮಸಿಂಗ.** — ತಂದೆ! ನಾನು ಕರ್ತವ್ಯವನ್ನು ಮಾತ್ರ ಕಂಡಿದ್ದೇನೆ.

**ಪರ್ವತಸಿಂಗ.** — ವೀರಪಿತನೆಂದೆನ್ನಿಸುವ ಪರಿವಿಡಿ ಹೀಗೆ ಮಗು. ತಂದೆ ಜೀವಿತದಲ್ಲಿರುವಾಗ ಮಗನ ಅಭಿವೃದ್ಧಿಯನ್ನು ನೋಡಬೇಕು. ಮಗನು ತನ್ನ ವೀರಧರ್ಮದ ಮೂರ್ತಿಯೆಂಬ ಭರವಸೆಯನ್ನು ಹೊಂದಿ, ತಂದೆಯು ವೀರನಂತೆ ಸಾಯಬೇಕು. ಅನಂತರ ಮೃತ್ಯುರಾಜ್ಯವನ್ನು ಪ್ರವೇಶಿಸಿದ ಮೇಲೆ, ಮತ್ತೂ ಲೋಕದ ಸುಖದುಃಖಗಳ ಕಡೆಗೆ ಕಣ್ಣು ತಿರುಗಿಸುವ ಶಕ್ತಿ ಆ ತಂದೆಗೆ ಇರುವುದಾದರೆ, ತನ್ನ ಮಗನ ಸಂಪೂರ್ಣಜೀವನದ ಪ್ರವೃದ್ಧವೀರತೆಯನ್ನು ಆ ರಾಜ್ಯದಲ್ಲಿ ಕುಳಿತು ನೋಡಬೇಕು! ಇದು

ಮಗು! ವೀರಪಿತನ ಉಚ್ಚಧ್ಯೇಯ. ಕಣ್ಣ ಮುಂದಕ್ಕೆ ಹಸುಗೂಸುಗಳ ವಧೆಯನ್ನು ನೋಡುವುದಲ್ಲ.

**ರಾಮಸಿಂಗ.** — ದೇಶಕ್ಕಾಗಿ ದೇಹಸಮರ್ಪಣ ಮಾಡುತ್ತೇವೆ.

**ಪರ್ವತಸಿಂಗ.** — ಹೌದು ರಾಮ; ದೇಶಕ್ಕಾಗಿಯೇ ಪ್ರಾಣಬಿಡುವುದೆಂಬುದರಲ್ಲಿ ಸಂದೇಹವೇನು? ನೀವು ಯಾವ ದೇಶವನ್ನು ದೇವರೆಂದು ಪೂಜಿಸುತ್ತೀರೋ ಅದೇ ನಮಗೂ ಜೀವಕೊಟ್ಟಿತು. ನೀವು ಎಷ್ಟು ವರ್ಷ ಬಾಳಿದಿರಿ, ಮಕ್ಕಳೇ? ಅದಕ್ಕಿಂತ ಹೆಚ್ಚು ನಾವು ಬಾಳಿದೆವು. ಈ ದೇಶದ ಸತ್ವವನ್ನು ಹೀರಿದೆವು. ನಮ್ಮ ಋಣವು ನಿಮ್ಮದಕ್ಕಿಂತ ಸಾವಿರ ಪಾಲು ಮಿಗಿಲು, ಆದರೂ ಈ ಮುಪ್ಪಿನಲ್ಲಿಯೂ ಆಸೆ. ಇದು ವರೆಗೆ ದೇಶಕ್ಕಾಗಿ ಸಾಯಲಿಲ್ಲ. ಈಗ ಪ್ರಾಯದ ಹೋಕಿನಲ್ಲಿಯೂ ಸಾಯುವುದು ಬೇಕೋ ಬೇಡವೋ ತಿಳಿಯುವುದಿಲ್ಲ, ಮಗು. ನಮ್ಮ ಲೀಲೆ, ಹಾ ಮಗಳೆ!, ಆಕೆಯನ್ನು ಸತ್ಪಾತ್ರಕ್ಕೊಪ್ಪಿಸಿ ಮತ್ತೆ

**ರಾಮಸಿಂಗ.** — ನಮಗೆ ಜಯಪ್ರಾಪ್ತಿಯಾದರೆ

**ಪರ್ವತಸಿಂಗ.** — ಯಜ್ಞಕುಂಡದಲ್ಲಿ ಅಗ್ನಿಪ್ರತಿಷ್ಠೆಯನ್ನು ಮಾಡಿದ ಮೇಲೆ ಜಯನಿರೀಕ್ಷಣೆಯೇ, ಮಗು?

**ರಾಮಸಿಂಗ.** — ಮತ್ತೇನು ಮಾಡಬೇಕು, ಪ್ರಭು?

**ಪರ್ವತಸಿಂಗ.** — ನೀನು ಯುದ್ಧಕ್ಕೆ ದುಡುಕಬಾರದು; ಲೀಲಾವತಿ ಆತ್ಮಾಹುತಿಯನ್ನು ಕೊಡಬಾರದು; ವಿಕ್ರಮಸಿಂಹನು ಹುತಾತ್ಮನಾಗಬಾರದು. ನಾವು ಕೆಲವು ಮಂದಿ ಸೈನಿಕರೊಂದಿಗೆ

**ರಾಮಸಿಂಗ.** — ತಂದೆ! ಈ ಮಾತಿಗೆ ಒಪ್ಪಲಾರೆ.

**ಪರ್ವತಸಿಂಗ.** — ಒಪ್ಪುವುದೇನು ಒಪ್ಪದಿರುವುದೇನು ಮಗು? ಮೊದಲು ನಾವು ಮತ್ತೆ ನೀವು ಎಂಬುದಿಷ್ಟೇ ಭೇದ.

**ರಾಮಸಿಂಗ.** — ಹೇಗಿದ್ದರೂ ನಾವು ಹಿಂದುಳಿಯಲಾರೆವು.

**ಪರ್ವತಸಿಂಗ.** — ಇದನ್ನು ಹಿಂದುಳಿವುದೆನ್ನಬಾರದು. ಈ ಕಾಡುಗಿಚ್ಚಿನಲ್ಲಿ ನಮ್ಮಂತಹ ತರಗೆಲೆಗಳು ಬೆಂದು ಬೂದಿಯಾಗಲಿ. ಇದರಿಂದ

ಕಿಚ್ಚು ಶಮನವಾದರೆ ನಮ್ಮ ಮುಂದಿನ ವಂಶಲತೆಯು ಚಿಗುರುವುದು. ಇಲ್ಲವಾದರೆ ಉಂಟಲ್ಲಾ ಮಹಾ ಯಜ್ಞ.

**ರಾಮಸಿಂಗ.**—ಅದಾಗದು; ಹೇಡಿಗಳಂತೆ ಹಿಂದುಳಿದು ಬದುಕಲಾರೆವು.

**ಪರ್ವತಸಿಂಗ.**—ಇದು ಭೀರುತ್ವವಲ್ಲ, ಮಗು! ಸಾಯುವುದು ಹೇಗೆ ಕೆಲವೊಮ್ಮೆ ಕರ್ತವ್ಯವಾಗಿ ಪರಿಣಮಿಸುವುದೋ ಹಾಗೆಯೇ ಬದುಕುವುದು ನಿತ್ಯದ ಕರ್ತವ್ಯ. ಮರಣಕ್ಕಿಂತಲೂ ಜೀವನವು ಘೋರವಾಗಿದೆ, ಮಗು. ಆದುದರಿಂದ ಹಿಂದುಳಿವವರಾರೋ ಅವರು ಹೇಡಿಗಳಲ್ಲ; ಪರಾಕ್ರಮಿಗಳು! ಸತ್ತ ಮೇಲೆ ಮಾಡುವ ಕರ್ತವ್ಯವಿಲ್ಲ. ಬದುಕುವವರೆಷ್ಟೋ ಕೆಲಸ ಮಾಡಬೇಕು.

**ರಾಮಸಿಂಗ.**—ಹೀಗೆ ಹೇಳಬಾರದು, ತಂದೆ.

**ಪರ್ವತಸಿಂಗ.**—ಯುದ್ಧಧರ್ಮವೇ ಹೀಗೆ. ವೀರರೆಲ್ಲಾ ಒಂದುಗೂಡಿ ನಾವು ಬದುಕುಗಳನ್ನು ಹಂಚಿಕೊಳ್ಳಬೇಕಾಗುತ್ತದೆ. ಸಮರ್ಥರಾದವರು ಉಳಿಯಬೇಕು; ಅಲ್ಲದವರು

**ರಾಮಸಿಂಗ.**—ತಂದೆ! ಆಗಲಿ; ನಿಮ್ಮೊಡನೆ ನಾವೂ ಬರುವೆವು.

**ಪರ್ವತಸಿಂಗ.**—ಯಾರೊಡನೆ ಯಾರು ಹೋಗುವರೋ ಆ ಸರ್ವಸಾಕ್ಷಿಯೇ ಬಲ್ಲ.

**ರಾಮಸಿಂಗ.**—ಎರಡು ಸಾವಿರ ಸೈನಿಕರೊಡನೆ ನಾಳೆ ನಾವು ಮುಂದೊತ್ತುವ.

**ಪರ್ವತಸಿಂಗ.**—ವೀರಪುತ್ರ! ಹಾಗೆಯೇ ಆಗಲಿ. ಮುಪ್ಪಿನಿಂದ ಜರ್ಜರಿತವಾದ ಈ ದೇಹಾಸ್ಥಿಗಳಲ್ಲಿ ಯಾವ ಚೈತನ್ಯವಿದೆಯೆಂದು ನೋಡಲು ನನ್ನ ಬಳಿಯಲ್ಲಿಯೇ ಇರು, ಮಗು!

**ರಾಮಸಿಂಗ.**—ತಂದೆ, ಅದೇಕೊ ತಿಳಿಯದು. 'ಮೃತ್ಯು' ಎಂದು ಕೇಳಿದೊಡನೆ ಕಾವಲಿಯಲ್ಲಿ ಹುರಿವ ಬತ್ತದಂತೆ ಮನಸ್ಸು ಅರಳಾಗುತ್ತದೆ.

**ಪರ್ವತಸಿಂಗ.**—ಹಾ ಅಭಿಮನ್ಯು! ನನ್ನನ್ನು ಒಮ್ಮೆ ಅಪ್ಪು.

**ರಾಮಸಿಂಗ** (ನಡುಗುವ ಸ್ವರದಲ್ಲಿ).—ಆಲಿಂಗನದ ಪುಣ್ಯ ಇನ್ನೆಲ್ಲಿ ದೊರಕುವುದು ? (ಎಂದು ಆಲಿಂಗಿಸುವನು).

**ಪರ್ವತಸಿಂಗ.**—ವೀರಪುತ್ರ! ಇನ್ನಪ್ಪುವುದು ಯುದ್ಧಭೂಮಿಯಲ್ಲಿ ಮಡಿದು ಬಿದ್ದಾಗ! (ಎಂದು ಮತ್ತೂ ಆಲಿಂಗಿಸುವನು).

---

## ದೃಶ್ಯ ೪

[ಆಹೋರಿನ ಕೋಟೆಯ ಹೊರಗೆ. ರಾತ್ರಿಯಲ್ಲಿ ; ಸ್ತ್ರೀಶಿಬಿರದ ಹೊರಗೆ ಮಧುಸೂದನ ಮತ್ತು ಬೀಬಿ.]

**ಬೀಬಿ.**—ಏನು ಬ್ರಾಹ್ಮಣ? ಈಗೀಗ ನನ್ನನ್ನು ಸಂಪೂರ್ಣ ಮರೆತೆ.

**ಮಧು.**—ಲೋಕದಲ್ಲಿ ನೆನಪಿನಲ್ಲಿಡಬೇಕಾದ ವಿಷಯಗಳು ಆಕಾಶದ ನಕ್ಷತ್ರಗಳಂತೆ ಅಸಂಖ್ಯವಾಗಿವೆ. ಯಾರೇನು ಮಾಡುವುದು ಬೀಬಿ? ಹಳೆಯದಾದುದೆಲ್ಲಾ ನೆನಪಿನಿಂದ ಮಾಸಿ ಹೋಗುತ್ತದೆ, ಹೊಸತಾದುದು ಉಳಿಯುತ್ತದೆ.

**ಬೀಬಿ.**—ಹಾಗಾದರೆ ನಾನು ಹಳಬಳು; ಮರೆಯ ಬೇಕಾದ ವಸ್ತು!

**ಮಧು.**—ಹಳಬಳೆಂದರೆ ಮುದುಕಿಯೆಂದರ್ಥವಲ್ಲ. ನಿನಗೂ ಮುಪ್ಪಿಗೂ ಇನ್ನೂ ಕೆಲವು ಗಜಗಳ ಅಂತರವಿದೆ. ಆದರೆ, ಈಗೀಗ ಮುಖ್ಯ ವಿಷಯಗಳು ಮಾತ್ರ ನೆನಪಿನಲ್ಲಿರುತ್ತವೆ.

**ಬೀಬಿ** (ಕಣ್ಣೀರು ಸುರಿಸುತ್ತಾ).—ಹುಂ; ಮುಖ್ಯ ವಿಷಯಗಳು ಮರೆತುಹೋಗುವುದಿಲ್ಲ. ನಾನು ಅಮುಖ್ಯೆ, ಮರೆತುಹೋಗುತ್ತದೆ.

**ಮಧು.**—ಇಲ್ಲ ಬೀಬಿ. ಮರವೆಯೆಂದರೆ ಎಷ್ಟುಕಾಲ ಬೀಬಿ? ಕ್ಷಣಿಕವಲ್ಲವೇ? ಅದು ಹೋಯಿತು ನೋಡು. ಸುರಿಯುತ್ತಿರುವ ನಿನ್ನೀ ಕಣ್ಣೀರಿನಿಂದ ಪೂರ್ವಸ್ಮರಣೆ ತೇಲಿ ಬಂತು. ಅಳಬೇಡ ಬೀಬಿ. ನೀನು ನನ್ನನ್ನು ಕರೆದುದೇಕೆ?

**ಬೀಬಿ.**—ನಾನೊಬ್ಬಳು ಅಮುಖ್ಯೆ. ನನ್ನನ್ನು ಮರೆಯಬಹುದು ಎನ್ನುವುದಕ್ಕೆ!

**ಮಧು.**—ಅದರಲ್ಲಿ 'ಬಹುದು, ಬಾರದು' ಎನ್ನುವುದಕ್ಕೇನಿದೆ?

**ಬೀಬಿ.**—ಇನ್ನು ಮರೆಯಬಹುದು, ಮಿಶ್ರ. ಎಲ್ಲರೂ ಒಬ್ಬರನ್ನೊಬ್ಬರು ಮರೆಯಬೇಕಾದ ಕಾಲ ಬಂದಿದೆ.

**ಮಧು.**—ಕಾಲ ಬಂದರೆ ಮರೆಯಲೇ ಬೇಕಷ್ಟೆ!

**ಬೀಬಿ.**—ಹೌದು, ಕಾಲ ಬರುವುದು (ಎಂದು ಸೆರಗಿನಿಂದ ಒಂದು ಹಾರವನ್ನು ತೆಗೆಯುವಳು). ಇನ್ನು ಮುಂದೆ ನಿಮಗೆ ನಾನು ಬೇಕಾಗಿಲ್ಲ.

**ಮಧು.**—ಅದೇನು ಹಾರವೇ? ಬೀಬಿ! ನಿನ್ನನ್ನು ಬೇಡವೆಂದವರಾರು? ಬೇಕು ಬೀಬಿ; ಬೇಕು.

**ಬೀಬಿ.**—ನನಗೆ, ಈ ಬಡವೆಗೆ ಇರುವ ಒಂದೇ ಒಂದು ಹಾರವನ್ನು ಅಪಹರಿಸಿ ಭಿಕ್ಷೆಬೇಡಿಸಬೇಕೆಂದಿರುವೆ ಅಲ್ಲವೇ ?

**ಮಧು.**—ಜಹಗೀರ್‌ದಾರರ ಹೆಂಡಿರು ಬೇಡುವರೇ ಬೀಬಿ ?

**ಬೀಬಿ.**—ಅಂತಹ ದೊಡ್ಡವರಿಗೆ ಈ ಅಲ್ಪಹಾರದಿಂದೇನು ಪ್ರಯೋಜನ ?

**ಮಧು.**—ಅಲ್ಪವೆನ್ನುವೆಯಾ ? ಬೀಬಿಯು ಕೈಮುಟ್ಟಿದ ಹಾರವು ಮಹತ್ತಲ್ಲವೇ ?

**ಬೀಬಿ.**—ಅಯ್ಯೋ ಗೊಡ್ಡು ಬ್ರಾಹ್ಮಣ! ನಿನ್ನ ಆಸೆಗೆ ಅಂತ್ಯವೇ ಇಲ್ಲ.

**ಮಧು.**—ಪ್ರೇಮೋಪಹಾರವಿದು.

**ಬೀಬಿ.**—ಮೂರ್ಖ! ಇದು ನಿನಗೆ ಸೇರತಕ್ಕುದು. ಅಸಂಬದ್ಧ ಪ್ರಲಾಪಗಳು ಬೇಡ.

**ಮಧು.**—ಹಾಗಾದರೆ ಕೊಡುವುದಿಲ್ಲವೇಕೆ ?

**ಬೀಬಿ.**—ಕೊಡುತ್ತೇನೆ ಇದು ಅಜೀಮ್‌ಖಾನನು ಮಾಡಿದ ದಾನ.

**ಮಧು.**—ಓಹೋ ತಿಳಿಯಿತು! ಸಮರಕ್ಕೆ ಹೊರಡುವ ಸಂದರ್ಭದಲ್ಲಿ ವಿಜಯಲಕ್ಷ್ಮಿಯನ್ನು ಸಂಪಾದಿಸಲೆಂದು ವಿಪ್ರೋತ್ತಮನಾದ ನನಗೆ ಅಲಂಕಾರದಾನ ಮಾಡಿದನೇ ?

**ಬೀಬಿ.**—ದಾನ ಸುಮ್ಮನೆ ಅಲ್ಲ. ನೂರು ಮಂದಿ ಸೈನಿಕರನ್ನು ಕೂಡಿಕೊಂಡು ಮುತ್ತಿಗೆಗೆ ಹೊರಡಬೇಕೆಂದನು.

**ಮಧು.**—ಇದೆಂತಹ ಮಾತು ? ನಾವು ಬ್ರಾಹ್ಮಣರು.

**ಬೀಬಿ.**—ಮತ್ತಷ್ಟು ಸೊಗಸಾಯಿತು.

**ಮಧು.**—ಯುದ್ಧಮಾಡುವುದು ಧರ್ಮವಿರುದ್ಧ!

**ಬೀಬಿ.**—ನಾನೇನು ಮಾಡಲಿ? ಸೇನಾಪತಿಯ ಆಜ್ಞೆಯಾಗಿದೆ.

**ಮಧು.**—ಇದೆಲ್ಲಾ ಸುಳ್ಳು, ಬೀಬಿ! ಪರಿಶುದ್ಧ ಬ್ರಾಹ್ಮಣನಿಗೆ ದಾನ ಮಾಡಬೇಕೆಂದು ತಿಳಿದವನಿಗೆ ವರ್ಣಾಶ್ರಮಧರ್ಮವೂ ತಿಳಿದಿರಬೇಕು.

**ಬೀಬಿ.**—ಆತನಿಗೆ ತಿಳಿದಿಲ್ಲ.

**ಮಧು.**—ತಿಳಿದಿಲ್ಲವಾದರೆ ಇನ್ನಾದರೂ ತಿಳಿಸು. ಯುದ್ಧಮಾಡುವುದು ಬ್ರಾಹ್ಮಣಧರ್ಮಕ್ಕೆ ವಿರೋಧವೆಂದು!

**ಬೀಬಿ.**—ದಾನಪಡೆವುದೂ ವಿರೋಧವೆನ್ನಲೋ?

**ಮಧು.**—ಥೂ ಬೀಬಿ. ನಮ್ಮ ಧರ್ಮದ ಗಂಧಗಾಳಿಯಿಲ್ಲ ನಿನಗೆ. ಪ್ರತಿಗ್ರಹವು ಷಟ್ಕರ್ಮದಲ್ಲಿ ಸೇರಿತು. ಬ್ರಾಹ್ಮಣರಿಗೆ ಷಟ್ಕರ್ಮದಲ್ಲಿ ಅಧಿಕಾರವಿದೆ.

**ಬೀಬಿ.**—ಅದರಲ್ಲಿಯೂ ಪ್ರತಿಗ್ರಹದಲ್ಲಿ ಹೆಚ್ಚಿನ ಅಧಿಕಾರವಲ್ಲವೇ?

**ಮಧು.**—ಈ ತಮಾಷೆ ಹಾಗಿರಲಿ! ನಿಜವಾಗಿಯೂ ನಾನೂ ಯುದ್ಧಕ್ಕೆ ಹೋಗಬೇಕೆಂದು ನಿನ್ನಾಶೆಯೋ ಬೀಬಿ?

**ಬೀಬಿ.**—ಹೂಂ.

**ಮಧು.**—ಯುದ್ಧಕ್ಕೆ ಹೋಗುವುದೆಂದರೆ ಸಾಯುವುದೆಂದರ್ಥ. ನಾನು ಸತ್ತರೆ, ಬೀಬಿ ಎಂಬ ಎರಡಕ್ಷರದ ಸುಂದರನಾಮವನ್ನು ಸ್ವರಬದ್ಧವಾಗಿ ಉಚ್ಚರಿಸುವವರಾರು, ಬೀಬಿ? (ನಿಟ್ಟುಸಿರುಬಿಡುವನು).

**ಬೀಬಿ.**—ಹೇಡಿ ಬ್ರಾಹ್ಮಣ! ನೀನು ಸಾಯು, ಇಲ್ಲವೆ ಬದುಕು; ಯಾರು ಬೇಡವೆನ್ನುತ್ತಾರೆ?

**ಮಧು.**—ನೀನೂ ಹೇಳುವುದಿಲ್ಲ?

**ಬೀಬಿ.**—ನಾನಂತೂ ಬೇಗನೆ ಕಣ್ಮರೆಯಾಗುವುದು ನಿಜ.

**ಮಧು** (ಆತ್ಮಗತ).—ಈ ಹಾರದೊಡನೆ! (ಪ್ರಕಾಶ) ಹಾಗೆ ಮಾಡ ಬೇಡ, ಬೀಬಿ!

**ಬೀಬಿ.** — ನಾನೇನೂ ಮಾಡುವುದಿಲ್ಲ; ತಾನಾಗಿ ಎಲ್ಲವೂ ನಡೆದು ಹೋಗುತ್ತದೆ.

**ಮಧು.** — ಅಯ್ಯೋ ಬೀಬಿ! ಅಂತಹ ಮಾತನ್ನು ಎತ್ತಬೇಡ.

**ಬೀಬಿ.** — ಈ ಹಾರ ನಿನಗೆ.

**ಮಧು.** — ಮನಸ್ಸು ಕರಗಿಸುವ ಮಾತು. ಪ್ರೇಯಸಿ ಕೊಟ್ಟ ಹಾರವನ್ನು ಬಿಡುವುದೆಂತು ?

**ಬೀಬಿ.** — ತೆಗೆದುಕೊ (ಎಂದು ಕೊಡುವಳು).

**ಮಧು.** — ಒಂದೆಡೆ ವ್ಯಸನವಾಗುತ್ತದೆ, ಬೀಬಿ. ಆದರೂ ನಿನ್ನ ಕಾಣಿಕೆಯನ್ನು ಬಿಟ್ಟು ಅಪಮಾನ ಮಾಡಲಾರೆ.

**ಬೀಬಿ.** — ಈ ಹಾರದೊಂದಿಗೆ ಒಂದು ಕರ್ತವ್ಯವೂ ನಿನಗೆ ದೊರೆಯುವುದು.

**ಮಧು.** — ಧರ್ಮವಿರೋಧಿ ಕರ್ತವ್ಯವಲ್ಲವಷ್ಟೆ?

**ಬೀಬಿ** — ಎಂದೂ ಅಲ್ಲ. ದಕ್ಷಿಣೆ ಸಿಕ್ಕುವ ಕರ್ತವ್ಯ.

**ಮಧು.** — ಹೇಳು ಬೀಬಿ, ನಾನು ಮಾಡಬೇಕಾದುದನ್ನು.

**ಬೀಬಿ.** — ಮತ್ತೇನೂ ಇಲ್ಲ. ಈ ಯುದ್ಧದಲ್ಲಿ ನಮ್ಮ ಪಕ್ಷಕ್ಕೆ ಅಪಜಯವಾದರೆ, ಸತ್ತು ಬೀಳುವವರಲ್ಲಿ ಇಬ್ಬರಿಗೆ ಆರ್ಯಧರ್ಮದಂತೆ ಶವಸಂಸ್ಕಾರ ಮಾಡು.

**ಮಧು.** — ಅಂತಹ ಮಾತುಗಳನ್ನಾಡು! ಇದು ಧರ್ಮವಿರೋಧವಲ್ಲ.

**ಬೀಬಿ.** — ಅದಕ್ಕೆ ದಕ್ಷಿಣೆಯಿದು!

**ಮಧು.** — ಯಾರ ಉತ್ತರಕ್ರಿಯೆ, ಬೀಬಿ ?

**ಬೀಬಿ.** — ಅಜೀಮ್‌ಖಾನನದು.

**ಮಧು.** — ಆತನು ತುರುಷ್ಕ.

**ಬೀಬಿ.** — ತುರುಕನ ಕಾಣಿಕೆಯನ್ನು ಸ್ವೀಕರಿಸಬಹುದು; ಉತ್ತರಕ್ರಿಯೆಯನ್ನು ಮಾಡಬಾರದಲ್ಲವೇ ?

**ಮಧು.** — ಮಾಡಬಾರದೆಂದಿಲ್ಲ. ಆಡಿನಂತೆ ಗಡ್ಡವುಳ್ಳ ಮುಲ್ಲಗಳು ಕುರಿಯಂತಿರುವ ಈ ಗೊಡ್ಡು ಬ್ರಾಹ್ಮಣನನ್ನು ಹಾಯು ಬಂದರೆ

**ಬೀಬಿ.**—ಯುದ್ಧ ಭೂಮಿಗೆ ಯಾರು ಬರುತ್ತಾರೆ ?

**ಮಧು.**— ಆಗಲಿ; ಮತ್ತೆ ?

**ಬೀಬಿ.**—ಮತ್ತೆ ನನ್ನ ಉತ್ತರಕ್ರಿಯೆಯನ್ನು ಮಾಡು.

**ಮಧು** (ಕಪಟಾಶ್ರುವನ್ನು ಸುರಿಸಿ).—ನೀನೂ ಸಾಯುತ್ತೀಯಾ ? ಬೀಬಿ! ಹೀಗೆ ಹೇಳಬೇಡ.

**ಬೀಬಿ**—ಆಗುವುದನ್ನು ಹೇಳಿದರೇನು ?

**ಮಧು.**—ಆಗುವ ಮೊದಲೇ ವ್ಯಸನಕ್ಕೆ ಪ್ರಾರಂಭವಾಗುತ್ತದೆ, ಬೀಬಿ.

**ಬೀಬಿ.**—ದೊಡ್ಡವರು ಸತ್ತರೆ ತಾನೆ ವ್ಯಸನ. ನನ್ನಂತಹ ಅನಾಥೆಯ ಸಾವಿನಿಂದ ಸಂತೋಷಿಸಬೇಕು.

**ಮಧು.**—ನನ್ನ ಭಾವನೆಯಲ್ಲಿ ನಿನಗಿಂತ ದೊಡ್ಡವರಿಲ್ಲ.

**ಬೀಬಿ.**—ಮಿಶ್ರರೇ, ಆಯಿತು. ನನ್ನ ಪ್ರಾಪಂಚಿಕವ್ಯಾಪಾರಗಳನ್ನೆಲ್ಲಾ ನಿರ್ಧರಿಸಿ ಆಯಿತು. ಇದನ್ನು ಹೇಳುವುದಕ್ಕಾಗಿಯೇ ನಿಮ್ಮನ್ನು ನೋಡಿ

**ಮಧು.**—ಹಾ! ಬೀಬಿ. ಇನ್ನು ನನಗಾರು ಗತಿ?

**ಬೀಬಿ.**—ಶಹನ ಜಹಗೀರು.

**ಮಧು.**—ನಿನ್ನ ಪ್ರೇಮಕ್ಕಿಂತ ದೊಡ್ಡ ಜಹಗೀರು ಲೋಕದಲ್ಲುಂಟೇ ಬೀಬಿ ? (ಬಿಕ್ಕಿಬಿಕ್ಕಿ ಅಳುವನು.)

**ಬೀಬಿ** (ಆತ್ಮಗತ).—ಕೃತಕಪ್ರೇಮಕ್ಕೆ ಕೃತಕದುಃಖವೇ ಪರಿಸಮಾಪ್ತಿ ಆಗಲಿ. (ಪ್ರಕಾಶ) ಮಿಶ್ರರೆ, ಹೋಗುತ್ತೇನೆ.

**ಮಧು.**—ಹೋಗಿ ಬರುವೆನೆಂದು ಹೇಳು.

**ಬೀಬಿ.**—ಹೋಗುತ್ತೇನೆ; ಬರುವುದಿಲ್ಲ.

**ಮಧು.**—ಅಯ್ಯೋ ನನ್ನ ದೌರ್ಭಾಗ್ಯವೇ! (ಎಂದು ಹೋಗುವನು).

**ಬೀಬಿ.**—ನನ್ನ ಹೇಯಜೀವನವಿಂದು ಸಂಪೂರ್ಣತೆಯನ್ನು ಹೊಂದಿದೆ. ಇನ್ನು ಬದುಕಬಾರದು. ಇರುವ ದಿನಗಳನ್ನು ಬೆರಳಲ್ಲಿ ಎಣಿಸಿ, ಈ ಲಜ್ಜಾಸ್ಪದ ಜೀವವನ್ನು ಎಲ್ಲಿಯಾದರೂ ಚೆಲ್ಲಿಬಿಡುತ್ತೇನೆ. (ಹೋಗುವಳು).

# ಐದನೆಯ ಅಂಕ

## ದೃಶ್ಯ ೧

ಶಿಬಿರಮಧ್ಯದಲ್ಲಿ ಅಹಮ್ಮದ್‌ಶಹನ ಓಡ್ಡೋಲಗ. ಕೆಲಸೈನಿಕರೂ ಅಜೀಮ್‌ಖಾನನೂ ನಿಂತಿರುವರು.]

**ಅಹಮ್ಮದ್.**— ಅಜೀಮ್‌ಖಾನ್! ರಜಪೂತರ ವಿಷಯವಾಗಿ ಏನಲ್ಲಾ ಆಲೋಚನೆ ಮಾಡಿರುವೆ?

**ಅಜೀಮು.**— ಇಲ್ಲ ಬುದ್ಧಿ! ಯಾವ ಆಲೋಚನೆಯೂ ಇಲ್ಲ. ಮನಸ್ಸು ಬಂಜರು ನೆಲದಂತಿದೆ. ಯಾವ ಅಭಿಪ್ರಾಯವೂ ಹುಟ್ಟುವುದಿಲ್ಲ.

**ಅಹಮ್ಮದ್.**— ಎಲೆಯ ಮೇಲೆ ಬಡಿಸಿ ಆಯಿತು. ಬಾಯಿಗೆ ತುತ್ತುಹಾಕಲು ಆಲೋಚನೆ ಅಲ್ಲವೆ?

**ಅಜೀಮು.**— ಯಾವ ಬಾಯಿ ಯಾವ ತುತ್ತು? ಒಂದೂ ತಿಳಿಯುವುದಿಲ್ಲ.

**ಅಹಮ್ಮದ್.**— ಸೇನಾಧಿಪತಿಗೆ ಇಂತಹ ಅವಸ್ಥೆ ಬರಲಾಗದು.

**ಅಜೀಮು.**— ಆಗಬಾರದುದು ಆಗುತ್ತದೆ ಈ ಕಾಲದಲ್ಲಿ!

**ಅಹಮ್ಮದ್.**— ಯುದ್ಧದ ಕಡಿವಾಣವನ್ನು ಹಿಡಿದುದೇಕೆ? ತಿಳಿಯುವುದಿಲ್ಲ.

**ಅಜೀಮು.**— ಯುದ್ಧಮಾಡಲು ಏನಾಗಬೇಕು ಪ್ರಭು? ಜೀವ ತೆಗೆವ ಕೋವಿಗುಂಡುಗಳು; ಸಿಡಿಮದ್ದುಗಳು; ಶಸ್ತ್ರಾಸ್ತ್ರಗಳು; ಕೊಲ್ಲುವ ಕಟುಕರು; ಸಾಯುವ ಕುರಿಗಳು; ಇಷ್ಟಿದ್ದರೆ ಯುದ್ಧವಾಯಿತಲ್ಲಾ!

**ಅಹಮ್ಮದ್.**— ಏನು ಅಜೀಮು? ಇತ್ತಿತ್ತ ನೀನು ರಾಜಾಜ್ಞೆಯನ್ನು ಪಾಲಿಸುವ ವಿಷಯದಲ್ಲಿ ನಿರುತ್ಸಾಹನಾಗಿರುವೆಯೇಕೆ?

**ಅಜೀಮು.**— ಇಲ್ಲ ಪ್ರಭು. ಉತ್ಸಾಹ ಕಡಿಮೆಯಾಗಲಿಲ್ಲ.

**ಅಹಮ್ಮದ್.** — ಇದು ಸುಳ್ಳು ಅಜೀಮ. ಗಂಭೀರವಾಹಿನಿಯಾದ ನದೀಪ್ರವಾಹವು ನಿರಾತಂಕವಾಗಿ ಹರಿವಾಗ, ಅದರ ಮಟ್ಟೇ ಬೇರೆ; ಆತಂಕ ವಿರುವಾಗ ಅದರ ರೀತಿಯೇಬೇರೆ; ಅಲ್ಲಲ್ಲಿ ಸುಳಿಗಳುಂಟಾಗುವುವು.

**ಅಜೀಮ.** — ಆದರೂ ಅದು ಹರಿಯುತ್ತದೆ ಅಲ್ಲವೇ ?

**ಅಹಮ್ಮದ್.** — ಫೂ! ಹರಿದರೆ ಸಾಲದು. ಹರಿವಂತೆ ಹರಿಯ ಬೇಕು.

**ಅಜೀಮ.** — ಹುಂ.

**ಅಹಮ್ಮದ್.** — ಉಪ್ಪನ್ನ ಕೊಟ್ಟು ಹೊರೆದವರಿಗೆ ಎಂದೂ ಪಶ್ಚಾತ್ತಾಪವುಂಟಾಗದಂತೆ ವರ್ತಿಸುವುದು ತಿಂದು ಬೆಳೆದವರ ಕರ್ತವ್ಯ.

**ಅಜೀಮ.** — ಹೌದು, ಖಾವಂದ! ನಾನು ತಿಂದಿದ್ದೇನೆ. ಗಿಡುಗನು ಸತ್ತ ಪ್ರಾಣಿಯ ಮಾಂಸವನ್ನು ತಿನ್ನುವಂತೆ ಖಾವಂದರ ಅನ್ನವನ್ನು ತಿಂದಿದ್ದೇನೆ, ಮರದಂತೆ ಬೆಳೆದಿದ್ದೇನೆ. ಆಗಬೇಕಾದುದೇನು ? ಅಪ್ಪಣೆಯಾಗಲಿ.

**ಅಹಮ್ಮದ್.** — ರಾಜಸೇವೆಗೆ ದೇಹವನ್ನೊಪ್ಪಿಸಿದರೆ ಸಾಲದು. ಮನೋಬುದ್ಧಿಗಳನ್ನು ಒಪ್ಪಿಸಬೇಕು. ರಾಜನಾದವನ ಕಾಂಕ್ಷೆಯಿದು ಸೇವಕನ ಕರ್ತವ್ಯವಿದು.

**ಅಜೀಮ.** — ಹಾಗೆಂದರೇನು ಬುದ್ಧಿ ?

**ಅಹಮ್ಮದ್.** — ನಿನ್ನ ಅಂಗೋಪಾಂಗಗಳಲ್ಲಿ ಚೈತನ್ಯವೇನೋ ಇದೆ. ಆದರೆ ರಾಜಸೇವೆಗೆ ಬರುವಾಗ ಮಾತ್ರ ಅವು ಮರಗಟ್ಟಿ ಹೋಗುತ್ತವೆ.

**ಅಜೀಮ.** — ಹುಂ; ನಾನು ಕೃತಘ್ನನು!

**ಅಹಮ್ಮದ್.** — ಹಾಗಲ್ಲ; ಮನಸ್ಸಿನಲ್ಲೇನೋ ವ್ಯಸನವಿರುವುದರಿಂದ ಈ ಮಾಂದ್ಯವುಂಟಾಗಿರಬಹುದು; ಅಲ್ಲವೆನ್ನುವುದಿಲ್ಲ. ಹಾಗೇನಾದರೂ ಇದ್ದರೆ ಹೇಳಬಾರದೇ ?

**ಅಜೀಮ.** — ಹೇಳುವುದೇನು ಬುದ್ಧಿ? ಉಪ್ಪನ್ನವನ್ನು ಉಂಡಿದ್ದೇನೆ. ಅದರಿಂದಾದ ಋಣವನ್ನು ತೀರಿಸುತ್ತೇನೆ.

**ಅಹಮ್ಮದ್.** — ಹಾಗಾದರೆ ರಾಜಕಾರ್ಯವನ್ನು ಕೇಳು.

**ಅಜೀಮು.** -- ಸಿದ್ಧನಾಗಿದ್ದೇನೆ.

**ಅಹಮ್ಮದ್.**—ಸ್ಥಿತಿಗತಿಗಳನ್ನು ಕಾಣುವಾಗ ಯುದ್ಧವು ಕಟ್ಟಿಟ್ಟ ಗಂಟೆಂಬಂತೆ ಕಾಣುತ್ತದೆ.

**ಅಜೀಮು.**—ಕಾರಣವೇನು ?

**ಅಹಮ್ಮದ್.**—ಮತ್ತೇನು ? ರಜಪೂತರ ಪ್ರತಿಜ್ಞೆ ಯಥಾರ್ಥವಾಗಿರುತ್ತಿದ್ದರೆ, ಈ ಕೋಟೆಯ ಬಾಗಿಲು ಈ ಮೊದಲೇ ತೆರೆಯಬೇಕಾಗಿದ್ದಿತು. ಈಗ ಹಾಗೇನೂ ಇಲ್ಲ. ಅವುಡು ಕಚ್ಚಿ ಹಲ್ಲುಮಸೆವವನ ರುದ್ರಮುಖದಂತೆ ಈ ಕೋಟೆಯ ದ್ವಾರವು ಭೀಕರವಾಗಿದೆ! ಗುಪ್ತಚಾರರಿಂದ ಕೇಳುತ್ತೇನೆ—ದಿನಂಪ್ರತಿ ಕಾರ್ಮುಗಿಲಿನಂತೆ ಅಸ್ತ್ರಗಳನ್ನು ಮಿಂಚಿಸಿ ವೀರಭಟರು ಕವಾಯತ್ತನ್ನು ಮಾಡುತ್ತಿರುವರೆಂದು! ಇದು ಸಂಧಾನದ ಲಕ್ಷಣವಲ್ಲ.

**ಅಜೀಮು.** — ಅಲ್ಲವೆಂಬುದರಲ್ಲಿ ಸಂದೇಹವೇನು ?

**ಅಹಮ್ಮದ್.**—ಹೋದ ಗುಪ್ತಚಾರರಲ್ಲಿ ಹೆಚ್ಚಿನವರು ಹಿಂತೆರಳುವುದಿಲ್ಲ. ಹೀಗೆ ನಾವು ತಟಸ್ಥರಾಗಿ ಕುಳಿತು, ರಾಜ್ಯತಂತ್ರವೆಂದು ಗುಪ್ತಚಾರರನ್ನು ಕಳುಹಿ ಕೊಲೆಮಾಡಿಸುವುದಕ್ಕಿಂತ ಒಮ್ಮೆ ಒಡ್ಡುಕಡಿದು ಸೈನಿಕರನ್ನು ಬಿಡೋಣ — ಹೀಗೆ ತೋರುತ್ತದೆ.

**ಅಜೀಮು.**—ಖಾವಂದರಿಗೆ ಯಾವುದು ತೋರಿತೋ ಅದೇ ನನ್ನಿಷ್ಟ.

**ಅಹಮ್ಮದ್.**—ಒಮ್ಮೆ ಆಹೋರಿನ ಗಡಿಯೊಳಗೆ ನುಗ್ಗಿ ವಿಜಯಧ್ವಜವನ್ನು ಊರಿ ಬಿಡೋಣ ಎಂದು ಆಲೋಚನೆಯಾಗುತ್ತಿದೆ.

**ಅಜೀಮು.**—ಉತ್ಸಾಹವು ಆರಿಹೋಗಬಾರದು; ಈಗಲೇ ರಣಭೇರಿಯನ್ನು ಹೊಡೆಯಿಸಬಹುದಲ್ಲ!

**ಅಹಮ್ಮದ್.**—ಆಗಲಿ; ಗುಪ್ತಚಾರರ ಅಭಿಪ್ರಾಯವೇನಂತೆ ? ನಿಜಸ್ಥಿತಿಗಳನ್ನು ಕಂಡವರಾದುದರಿಂದ, ಅವರ ಮಾತಿಗೆ ಬೆಲೆ ಕೊಡಬೇಕು.

**ಅಜೀಮು.**—ಹೋಗಿ ಹಿಂತಿರುಗಿದವರು ಕೆಲವೇ ಮಂದಿ. ಹೀಗೆ ಬಂದವರ ಮೈ ನಡುಗುತ್ತಿದೆ.

**ಅಹಮ್ಮದ್.**—ಕಾರಣ ?

**ಅಜೀಮ.**—ಆರು ಸಾವಿರ ಭಟರು ಖಡ್ಗಧಾರಿಗಳಾಗಿ ನಿಂತಿರುವ ರಂತೆ. ಅವರನ್ನು ಕೊಂದು ರಕ್ತಸಾಗರದಲ್ಲಿ ದೋಣಿ ಹಾಯಿಸಿ ಹುಡುಗಿಯ ಮೇಲೆ ಕೈಹಾಕಬೇಕಂತೆ.

**ಅಹಮ್ಮದ್.**—ನಮ್ಮಲ್ಲಿ ಈಗಲೇ ಹತ್ತು ಸಾವಿರ ಬಲವಿದೆ. ಹಿಂದಿನಿಂದ ಸೇನಾಸಾಗರವೇ ಹರಿದುಬರುತ್ತಿದೆ.

**ಅಜೀಮ.**—ಬರಿಯ ಸಂಖ್ಯಾಬಲದಿಂದ ಪ್ರಯೋಜನವಿಲ್ಲ, ಪ್ರಭು!

**ಅಹಮ್ಮದ್.**—ಅಹಮ್ಮದ್ ಶಹನ ಸೈನಿಕರು ಶೌರ್ಯಹೀನರೆಂದು ಯಾರು ಹೇಳುತ್ತಾರೆ?

**ಅಜೀಮ.**—ಯಾರೂ ಹಾಗೆ ಹೇಳಲಿಲ್ಲ. ಆದರೆ ನಮ್ಮ ಸೈನಿಕರ ಶೌರ್ಯಕ್ಕೂ ಅವರು ಕಟ್ಟಿ ತಂದ ಬುತ್ತಿಗೂ ಹೆಚ್ಚಿನ ಸಂಬಂಧವುಂಟು.

**ಅಹಮ್ಮದ್.**—ಮತ್ತೆ?

**ಅಜೀಮ.**—ಈ ಬುತ್ತಿ ಮುಗಿದು ಇನ್ನೊಬ್ಬನ ಬುತ್ತಿ ಸಿಕ್ಕಿದರೆ ಅಲ್ಲಿಗೆ ಸೇರುವರು.

**ಅಹಮ್ಮದ್.**—ನನ್ನ ಕೈಯಲ್ಲಿದೆ ಕಾಲದಂಡ!

**ಅಜೀಮ.**—ಈ ದಂಡವು ಬರಿಯ ಕಾಷ್ಠದಂಡ. ಇದಕ್ಕೆ ಕಾಲದಂಡವೆಂಬ ಹೆಸರು ಬರುವುದೇ ಸೈನಿಕರಿಂದ? ಅವರನ್ನಾಳಲು ಈ ದಂಡಕ್ಕೆ ಶಕ್ತಿಯಿಲ್ಲ. ಪ್ರಭು! ಎಷ್ಟೇ ಶಕ್ತಿಯಿದ್ದರೂ ಹೊಟ್ಟೆಯನ್ನೂ ಲೋಭವನ್ನೂ ತಡೆಯಲಾಗುವುದೇ?

**ಅಹಮ್ಮದ್.**—ಹಾಗಾದರೆ ನಿನ್ನ ಅಭಿಮತವೇನು?

**ಅಜೀಮ.**—ಮತ್ತೇನೂ ಇಲ್ಲ. ಸದ್ಯಕ್ಕೆ ಯುದ್ಧ ಬೇಡವೆಂದು.

**ಅಹಮ್ಮದ್.**—ಎಲೆಯ ಮುಂದೆ ಹಸಿದು ಕುಳಿತಿರುವುದು!

**ಅಜೀಮ.**—ಇಂದಿರುವ ಯುದ್ಧ ನಾಳೆಯೂ ಇದೆ ಪ್ರಭು!

**ಅಹಮ್ಮದ್.**—ಯುದ್ಧವನ್ನು ಮುಂದೆ ದೂಡಿ ಪ್ರಯೋಜನವೇನು?

**ಅಜೀಮ.**—ಮತ್ತೇನೂ ಇಲ್ಲ. ನರವಧೆಯಿಲ್ಲದೆ ಉದ್ದೇಶಸಿದ್ಧಿಯಾಗುವುದಿದ್ದರೆ ಆಗಲಿ, ಎಂಬುದು.

**ಅಹಮ್ಮದ್.**—ಅದು ಹೇಗೆ?

**ಅಜೀಮ.**—ನಮ್ಮ ಸೈನಿಕರು ಮತ್ತೇನೂ ಮಾಡದೆ ದುರ್ಗದ ನಾಲ್ಕು ದಿಕ್ಕುಗಳಲ್ಲಿಯೂ ಡೇರೆ ಹೊಡೆದು ಕುಳಿತಿರಬೇಕು. ಭೇರಿಯನ್ನು ತಾಡಿಸುತ್ತಿರಬೇಕು. ಆಗ ರಜಪೂತಯೋಧ್ಧರಲ್ಲಿ ಹಲವರ ಧೈರ್ಯ ವಾದರೂ ಒಳಗೊಳಗೆ ಸೋರಿಹೋಗುವುದು. ಅದಕ್ಕಿಂತಲೂ ಹೆಚ್ಚಿನ ಪ್ರಯೋಜನವೆಂದರೆ, ರಜಪೂತರಿಗೆ ಹೊರಗಿನಿಂದ ಆಹಾರವಸ್ತುಗಳು ಹೋಗಲು ನಿರ್ಬಂಧವಾಗುವುದು. ಈಗ ಕೂಡಿಟ್ಟ ದವಸಧಾನ್ಯಗಳು ಒಂದಲ್ಲ ಒಂದು ದಿನ ಮುಗಿಯಬೇಕಷ್ಟೆ. ಹೊಟ್ಟೆಗೆ ಕಾಳಿಲ್ಲದಿರುವಾಗ ಅವರ ಯುದ್ಧೋತ್ಸಾಹ ತನ್ನಿಂದ ತಾನೆ ತಗ್ಗಿಹೋಗುವುದು.

**ಅಹಮ್ಮದ್.**—ಮತ್ತೇನು ?

**ಅಜೀಮ.**—ಹೊಟ್ಟೆಗಿಲ್ಲದೆ ಹೆಂಡಿರುಮಕ್ಕಳು ನರಳುತ್ತಿರುವಾಗ, ರಜಪೂತರು ನಮ್ಮೊಡನೆ ಸಂಧಿಗೆ ಬರಬಹುದು. ಬಂದರೆ ಕನ್ನಡಿಯ ಗಂಟು ಕೈಗೆ ಸಿಕ್ಕುವುದು. ಇಲ್ಲವೆಂದಾದರೆ ನಮಗೆ ನಷ್ಟವಿಲ್ಲ. ಅನ್ನವಿಲ್ಲದೆ ಕ್ಷೀಣವಾದ ಆ ರಜಪೂತರ ಅಸ್ತಿಪಂಜರಗಳನ್ನು ಒಂದೊಂದೇ ಏಟಿನಿಂದ ಸುಲಭವಾಗಿ ಪುಡಿಮಾಡಬಹುದು.

**ಅಹಮ್ಮದ್.**—ಇದೇ ನಿನ್ನ ಸಮ್ಮತವೋ ?

**ಅಜೀಮ.**—ಹೌದು, ಖಾವಂದ!

**ಅಹಮ್ಮದ್.**—ನಿನ್ನ ಮಾತನ್ನು ನಂಬುತ್ತೇನೆ; ಅಜೀಮ.

**ಅಜೀಮ.**—ನಂಬಬಹುದು, ಅಥವಾ ನಂಬದಿರಬಹುದು. ಇದು ನನಗೆ ಕಂಡ ನೀತಿ.

**ಅಹಮ್ಮದ್.**—ಹಾಗೆಯೇ ಆಗಲಿ; ರಜಪೂತರೊಡನೆ ಕಣ್ಣ ಮುಚ್ಚಾಟವಾಡಬೇಕೆಂದು ನಿನ್ನ ಅಪೇಕ್ಷೆ. ಅದೂ ಆಗಿಹೋಗಲಿ!

**ಅಜೀಮ.**—ಹೆಚ್ಚೆಂದರೆ ಐದಾರು ತಿಂಗಳು ಈ ಸ್ಥಿತಿ ?

**ಅಹಮ್ಮದ್.**—ಮತ್ತೆ ?

**ಅಜೀಮ.**—ಮತ್ತೆ ಆಹೋರಿನ ಭಾಗ್ಯಕ್ಕೆ ಮುದ್ರೆ ಬೀಳುವುದು.

**ಅಹಮ್ಮದ್.**—ನಿನ್ನ ತಂತ್ರಕ್ಕೆ ಒಪ್ಪಿದೆ, ಅಜೀಮು. ಆದರೆ ಸೇನೆಯಲ್ಲಿ ಸರಿಯಾದ ಅಂಕೆಯಿಟ್ಟುಕೊ! ಸದ್ಯಕ್ಕಂತೂ ಯುದ್ಧವಿಲ್ಲವಾದುದರಿಂದ ಸ್ವಲ್ಪ ಆಲಸ್ಯದಲ್ಲಿ ಮೈಚಾಚಿಕೊಳ್ಳುತ್ತೇನೆ.

**ಅಜೀಮ.**—ಆಗಬಹುದು, ಖಾವಂದ! ನನಗೆ ಅಪ್ಪಣೆ ಕೊಡಿರಿ.

**ಅಹಮ್ಮದ್.**—ಹಾಗೆಯೇ ಆಗಲಿ.

[ಇಬ್ಬರೂ ಹೋಗುವರು.]

## ದೃಶ್ಯ ೨

[ಸಂಧ್ಯಾಕಾಲ; ಕಾಳಿಕಾಮಂದಿರದಲ್ಲಿ ಲೀಲಾವತಿ ಮತ್ತು ವಿಕ್ರಮಸಿಂಹ. ಲೀಲಾವತಿ ಪೂಜೆತೀರಿಸಿ ಬರುತ್ತಿದ್ದಾಳೆ. ವಿಕ್ರಮನು ಅವಳ ಹಿಂದೆ ಬರುತ್ತಿದ್ದಾನೆ.]

**ವಿಕ್ರಮ.**—ಲೀಲಾವತಿ! ಅಲ್ಲ; ದೇವಿ ಲೀಲಾವತಿ.

**ಲೀಲಾವತಿ.**—ಏನು ವಿಕ್ರಮ ? ಎಂದಿಲ್ಲದ 'ದೇವಿ' ಇಂದು ಬಂದಿದ್ದಾಳೆ.

**ವಿಕ್ರಮ.**—ದೇವಿ! ಇಂದು ನಿನ್ನನ್ನು 'ದೇವಿ' ಎಂದೇ ಸಂಬೋಧಿಸಬೇಕೆಂದು ಮನಸ್ಸು ಹೇಳುತ್ತದೆ.

**ಲೀಲಾವತಿ.**—ಇಷ್ಟು ವರ್ಷಗಳ ಸಲಿಗೆಯನ್ನು ಒಮ್ಮೆಯೇ ಮರೆತು ಬಿಡಬೇಕೆನ್ನುತ್ತಿದೆ; ಅಲ್ಲವೇ ?

**ವಿಕ್ರಮ.**—ಸುಖಕಾಲಗಳಲ್ಲಿ ಸಲಿಗೆ ಒಪ್ಪುವುದು. ಈಗ ಅದಕ್ಕೆಲ್ಲಿ ಆಸ್ಪದ ? ಸಲಿಗೆ ಹಿಡಿದು ಮಾತಾಡಿದರೆ ಪೂರ್ವಸ್ಮರಣೆ ಬರುವುದು, ತಾಯಿ! ಪೂರ್ವಸ್ಮರಣೆಯಿಂದ ಎದೆಕರಗುವುದು. ಆಗ ಕ್ಷತ್ರಧರ್ಮಕ್ಕೆ ತಿಲಾಂಜಲಿಯೇ ಸರಿ, ತಾಯಿ!

**ಲೀಲಾವತಿ.**—ಬಲ್ಲೆನು ನಾಳೆ ಎಂತಹ ಭಯಂಕರ ಯುದ್ಧವಾಗುವುದೆಂದು. ಆದರೇನು ? ರಜಪೂತ ಸ್ತ್ರೀಪುರುಷರಿಗೆ ತಮ್ಮ ಕರ್ತವ್ಯವೇನೆಂದು ಗೊತ್ತೇ ಇದೆ. ಮೃತ್ಯುವೆಂಬ ಕೊನೆಯ ಮೆಟ್ಟಲನ್ನೇರುವ ಮೊದಲೇ ಒಮ್ಮೆ ಸಲಿಗೆಯಿಂದ ಆಡಿಬಿಡೋಣ!

**ವಿಕ್ರಮ.**—ಅದೆಲ್ಲರಿಗೂ ಸುಲಭವಲ್ಲ.

**ಲೀಲಾವತಿ.**—ಯಾವುದಾದರೊಂದು ಯುದ್ಧದಲ್ಲಿ ಜಯಹೊಂದಿ ಮರಳಿ ಬರುವ ವೀರನಿಗೆ ಸ್ವಾಗತೋತ್ಸವದ ಸಂದರ್ಭದಲ್ಲಿ ಎಂತಹ ಸಂತೋಷವಾಗುವುದೋ ಅಂತಹ ಸಂತೋಷವೇ ಮೃತ್ಯುಸನ್ನಿಧಿಯಲ್ಲಿಯೂ ಆಗಬೇಕು, ವಿಕ್ರಮ.

**ವಿಕ್ರಮ.**—ಆಗಬೇಕೆಂಬುದು ನಿಜ; ಆಗುವುದಿಲ್ಲವೆಂಬುದು ಸತ್ಯ.

**ಲೀಲಾವತಿ.**—ಸತ್ತ ಮಾತ್ರದಿಂದ ಒಬ್ಬನು ವೀರನಾಗುವುದಿಲ್ಲ; ಹೀಗೆ ಸಾಯಬೇಕು. ಹಾಗಾದರೆ ಮಾತ್ರ ಲೋಕೈಕ ವೀರನೆನಿಸಿ ಕೊಳ್ಳುತ್ತಾನೆ.

**ವಿಕ್ರಮ.**—ಇದು ದೊಡ್ಡ ವೇದಾಂತ.

**ಲೀಲಾವತಿ.**—ಇದನ್ನು ಕಲಿತು ಆಚರಣೆಗೆ ತರುವುದೇ ಜೀವನದ ಧ್ಯೇಯವಾಗಿರಬೇಕು.

**ವಿಕ್ರಮ.**—ನಿನ್ನ ವಯಸ್ಸೊ! ಇನ್ನು ಮೊಗ್ಗೆಯಾಗಿದೆ ತಾಯಿ!

**ಲೀಲಾವತಿ.**—ಹೌದು; ನನ್ನ ಇಷ್ಟಾರ್ಥಸಿದ್ಧಿಯು ಬೇಗನೆ ಆಗುವುದು. ಎಲ್ಲರಿಗೂ ಇಷ್ಟು ಪುಣ್ಯ ದೊರೆಯುವುದಿಲ್ಲ.

**ವಿಕ್ರಮ.**—ಲೀಲಾವತಿ! ನನಗೀ ತತ್ವವನ್ನು ಕಲಿಸು!

**ಲೀಲಾವತಿ.**—ಇದರಲ್ಲಿ ಕಲಿಸಲೇನಿದೆ ವಿಕ್ರಮ? ಹೇಡಿಗಳೂ ಒಂದು ದಿನ ಸಾಯುತ್ತಾರೆ. ಪರಾಕ್ರಮಿಗಳೂ ಸಾಯುತ್ತಾರೆ. ಸಾವು ತಪ್ಪುವುದಿಲ್ಲವೆಂದ ಮೇಲೆ ತಕ್ಕಂತೆ ಸಾಯುವುದೇ ಕರ್ತವ್ಯವೆಂದಾಯಿತು.

**ವಿಕ್ರಮ.**—ಲೀಲೆ! ನಿನ್ನ ನುಣ್ಬುಟಿಯಿಂದ ಇಂತಹ ಪರುಶಾಲಾಪವೇ?

**ಲೀಲಾವತಿ.**—ಇದೇನು ? ಇಂದು ವೀರಧರ್ಮಕ್ಕೆ ಲೋಪ ಬಂತೇ ?

**ವಿಕ್ರಮ.**—ಇಲ್ಲವಾದ ಕಾರಣ ಹೀಗೆ ನುಡಿದೆ.

**ಲೀಲಾವತಿ.**—ಹಾಗಾದರೆ ರಣದುಂದುಭಿ ಕರೆವಾಗ, ಇತರ ವಿಚಾರವೇಕೆ ?

**ವಿಕ್ರಮ.**—ಇತರ ವಿಚಾರಗಳೇನೂ ಇಲ್ಲ. ರಣದುಂದುಭಿ ಕರೆಯುತ್ತಿದೆ; ಈ ಬಾಹು ತುರಿಸುತ್ತಿದೆ. ಬಹುಶಃ ಇದೇ ನಮ್ಮ ಆಯುರ್ಮಾನದ ಕೊನೆಯ ದಿನ.

**ಲೀಲಾವತಿ.**—ಕೊನೆಯ ದಿನದಲ್ಲಿ ತಕ್ಕಂತೆ ವರ್ತಿಸೋಣ.

**ವಿಕ್ರಮ.**—ತಕ್ಕಂತೆಯೇ ಸರಿ. ಆ ನರಾಧಮನಾದ ಅಹಮ್ಮದ್ ಶಹನನ್ನು ಕೊಂದು ಕೂಗದಿದ್ದರೆ ನಮ್ಮ ಕೆಲಸಗಳೆಲ್ಲಾ ಜಳ್ಳಾಗುವುವು.

**ಲೀಲಾವತಿ.**—ಯುದ್ಧಭೂಮಿಯಿದೆ. ಎದೆಯಿದ್ದವರು ಕೊಲ್ಲಬಹುದು.

**ವಿಕ್ರಮ.**— ಅಲ್ಲಿ ಯಾರಿಗೆ ಉಳಿವು ಯಾರಿಗೆ ಅಳಿವು ಎಂದು ಹೇಳುವುದು ಹೇಗೆ ?

**ಲೀಲಾ.**— ಸಾಧ್ಯವಿಲ್ಲ. ಆದುದರಿಂದೇನು ?

**ವಿಕ್ರಮ.**— ಯುದ್ಧಭೂಮಿಗೆ ಇಳಿದ ಮೇಲೆ ಸಾಯುವೆವೆಂದೇ ಭಾವಿಸಬೇಕು. ನಮ್ಮ ಸ್ಥಿತಿ ಅಂತಹದು. ನಮ್ಮ ಧರ್ಮವು ಹಾಗೆ ಕಲಿಸಿದೆ. ದೊಡ್ಡ ನೆರೆ ಬಂದು ಊರನ್ನೇ ಹೊಡೆದು ಹೋದರೂ, ಅಲ್ಲಲ್ಲಿ ಮರಗಿಡಗಳ ಮೇಲೆ, ಪೊದರಿನಲ್ಲಿ ಸಿಲುಕಿಕೊಂಡಿರುವ ಕಸಕಡ್ಡಿಗಳಂತೆ ಜೀವ ಹಿಡಿದುಕೊಳ್ಳುವುದು ರಜಪೂತಧರ್ಮವಲ್ಲ.

**ಲೀಲಾ**— ಸರಿ; ಒಪ್ಪಿದೆ.

**ವಿಕ್ರಮ.**— ನಮಗೇ ಮೊದಲು ಮರಣ ಬಂದರೆ, ಅಹಮ್ಮದ್ ಶಹನನ್ನು ಕೊಲ್ಲುವ ಉಪಾಯವಿಲ್ಲ.

**ಲೀಲಾ.**— ಹಾಗಾದರೇನು ಅಹಮ್ಮದ್ ಶಹನ ಕೊಲೆ ಮಾಡುವ ಹೇತುವಿನಿಂದ ಈಗ ಯುದ್ಧಭೂಮಿಗೆ ನಮಸ್ಕಾರ ಮಾಡುವುದೇ ?

**ವಿಕ್ರಮ.**— ನಾವಿಬ್ಬರೂ ಬದುಕುವುದು; ಹಗೆ ಸಾಧಿಸುವುದು; ಮತ್ತೆ ಸಾಯುವುದು!

**ಲೀಲಾ.**— ವಿಕ್ರಮ! ಏಕೋ ತಿಳಿಯೆ. 'ಬದುಕು' ಎಂಬ ಶಬ್ದದೊಡನೆ ಹೇಡಿತನವೇ ಕಣ್ಣೆದಿರಲ್ಲಿ ಬಂದು ನಿಲ್ಲುವುದಲ್ಲಾ !

**ವಿಕ್ರಮ.**— ಸುಮ್ಮನೆ ಸತ್ತ ಮನುಷ್ಯನು ಮಹಾವೀರನೆನ್ನಿಸುವುದಿಲ್ಲ.

**ಲೀಲಾ.**— ಆಗಿರಬಹುದು. ಆದರೂ ಆ ಮಾತು ಕೇಳಿದೊಡನೆ ತಾತ್ಸಾರವುಂಟಾಗುತ್ತದೆ. ಊರ ಜನರೆಲ್ಲಾ ತೀರ್ಥಸ್ನಾನಮಾಡಲು ತಡಗಂಡಿಗೆ ದುಮುಕುವಂತೆ, ಅಹೋರಿನ ಕೋಟೆಯೊಳಗಿನ ಆಬಾಲವೃದ್ಧರು ಹಿಂದೆ ಮುಂದೆ ನೋಡದೆ ದುಡುಕುತ್ತಿರುವಾಗ ನಮಗಿನ್ನೂ ಬದುಕಿನ ಯೋಚನೆ!

**ವಿಕ್ರಮ.**— ಬದುಕೆಂದರೆ ಹೇವರಿಸಬೇಕಾಗಿಲ್ಲ ಲೀಲೆ. ನಮ್ಮ ಬದುಕಿನಿಂದ ಅಹಮ್ಮದ್ ಶಹನ ಸಾವು ಸಿದ್ಧವಾಗುವುದಿದ್ದರೆ, ನೀನು ಏನೆನ್ನುವೆ ?

**ಲೀಲಾ** (ಸ್ವಲ್ಪ ಆಲೋಚಿಸಿ).— ಏನೂ ತಿಳಿಯುವುದಿಲ್ಲ.

**ವಿಕ್ರಮ.**—ಇದೆಲ್ಲ ಭವಿಷ್ಯದ ಭೀಕರ ದೃಶ್ಯ. ಹೌದು; ಭೀಕರ! ಆದರೂ ಆಗುವ ವಿಷಯ. ಅಹಮ್ಮದ್ ಶಹನಿಗೆ ಆಹೋರು ವಶವಾಗುವುದು. ಆದರೆ ನಗುತ್ತಿರುವ ಆಹೋರಲ್ಲ; ಅಳುತ್ತಿರುವ ಆಹೋರು; ಅಸಂಖ್ಯಾತ ಚಿತೆಗಳಲ್ಲಿ ಸೂಸುತ್ತಿರುವ ಕಾಲಧೂಮದಿಂದ ಭಯಾನಕವಾದ ಆಹೋರು ಅವನ ವಶವಾಗುವುದು.

**ಲೀಲಾ.**—ನಿಜ.

**ವಿಕ್ರಮ.**—ಆಗ ಅವನ ಮತಿಭ್ರಾಂತಿಯಾಗುವುದೆಂದು ತಿಳಿ ಪಾತಕಿಗಳ ಅವಸ್ಥೆಯೇ ಹಾಗೆ.

**ಲೀಲಾ.**—ಸರಿ.

**ವಿಕ್ರಮ.**—ಆಗ ನಾವು ಬದುಕಿದ್ದರೆ ಸರ್ವನಾಶಕನನ್ನು ಸಂಹರಿಸಬಹುದು.

**ಲೀಲಾ.**—ಹೇಗೆ ?

**ವಿಕ್ರಮ.**—ಮೊದಲೇ ಮರುಳು ಬುದ್ಧಿ; ಅದು ಭ್ರಾಂತವಾದರೆ ಕೇಳುವುದೇನು ? ಆಹೋರಿನ ರಜಪೂತರು ಮೊದಲೇ ಕಪಟವನ್ನು ಅಭ್ಯಸಿಸಿರುವರು. ಅದೇ ಕಪಟದ ಸಹಾಯದಿಂದ ನಮ್ಮ ಸರ್ವ ಕಾರ್ಯಗಳಿಗೆ ಮುಕುಟವಿಡಬಹುದು.

**ಲೀಲಾ.**—ಹೌದು; ಮತ್ತೊಮ್ಮೆ ಲೀಲಾವತಿಯು ಹೆಸರನ್ನು ಒತ್ತೆಯಿಡಬೇಕಲ್ಲವೇ ?

**ವಿಕ್ರಮ.**—ಮಾಡುವುದೇನು ತಾಯಿ ? ವ್ಯವಹಾರಪ್ರಪಂಚವೇ ಹೀಗೆ. ಸತ್ಯವೆಂಬ ಪುತ್ಥಳಿಚಿನ್ನಕ್ಕೆ ಬೆಲೆ ಕಡಿಮೆ ತಾಯಿ. ಠಕಾರಿ ಚಿನ್ನಕ್ಕೆ ಹೆಚ್ಚು ಮೌಲ್ಯ!

**ಲೀಲಾ.**—ಇದೇ ನಿಜವೆಂದಾಯಿತು.

**ವಿಕ್ರಮ.**—ಬೇರೆ ಉಪಾಯ ಕಾಣುವುದಿಲ್ಲ, ತಾಯಿ!

**ಲೀಲಾ.**—ಆಹೋರುನಗರವಾಸಿಗಳ ಮುಖಕ್ಕೆ ಮೃತ್ಯುಮುದ್ರೆ ಬಿದ್ದಿರುವಾಗ ಇಷ್ಟೆಲ್ಲಾ ಪ್ರಸಂಗಗಳಲ್ಲವೇ ?

**ವಿಕ್ರಮ.**—ನಮ್ಮ ಗತಿಯೂ ಅದೇ ದೇವಿ. ಕರ್ತವ್ಯವಾಡಿದ ಕೃತಕೃತ್ಯತೆಯಿ[illegible]

**ಲೀಲಾ** (ಚಿಂತಾಪರಳಾಗಿ).—ನಾನು ಬದುಕಿರುತ್ತಾ, ನಾಳೆಯ ಪ್ರಲಯದೃಶ್ಯಗಳನ್ನು ನೋಡುವುದು ಹೇಗೆ ?

**ವಿಕ್ರಮ.**—ಮಹಾಯಜ್ಞದ ಪೂರ್ಣಾಹುತಿಗೆ ನಾವು!

**ಲೀಲಾ.**—ವಿಕ್ರಮ! ನಿನಗೆ ಇಂತಹ ಯೋಚನೆ ಹೇಗೆ ಮೂಡಿತಣ್ಣ ?

**ವಿಕ್ರಮ.**—ಸುತ್ತಲೂ ನಿರಾಶೆ, ತಾಯಿ! ನಿರಾಶೆ! ಆದರ ಕತ್ತಲೆಯೊಳಗೆ ಈ ಸಣ್ಣ ಕಿಡಿ ಹಾರಿತು.

**ಲೀಲಾ.**—ವಿಕ್ರಮ! ನಿನ್ನಲ್ಲಿ ಒಂದೇ ಒಂದು ಪ್ರಶ್ನೆ ಕೇಳುತ್ತೇನೆ. ಅನ್ಯಥಾ ಭಾವಿಸಬೇಡ.

**ವಿಕ್ರಮ.**—ಕೇಳು ತಾಯಿ! ಬೇಕಾದಷ್ಟು ಕೇಳು!

**ಲೀಲಾ.**—ನಿನ್ನ ಮಾತಿನಲ್ಲಿ ವಿಷಯವಾಸನೆಯ ಲೇಪವಿಲ್ಲ.

**ವಿಕ್ರಮ.**—ಎಂತಹ ನಿಷ್ಠುರ ಹೃದಯವಮ್ಮ ನಿನಗೆ? ನಿನ್ನನ್ನು ತಾಯಿಯೆಂದು ಸಂಬೋಧಿಸುತ್ತಿಲ್ಲವೆ ನಾನು ? ಒಮ್ಮೆ ಇತ್ತು; ಈಗ ಇಲ್ಲ!

**ಲೀಲಾ.**—ವಿಕ್ರಮ! ಹಾಗಾದರೆ ಪ್ರತಿಜ್ಞೆಮಾಡು ಈ ಭವಾನಿಯ ಮುಂದೆ!

**ವಿಕ್ರಮ.**—ಭವಾನಿ! ನನ್ನ ಪವಿತ್ರ ಭಾವನೆಗೆ ನೀನೇ ಸಾಕ್ಷಿ.

**ಲೀಲಾ** (ವಿಕ್ರಮನ ಕಾಲಿಗೆರಗಿ).—ಕ್ಷತ್ರ ಸಿಂಹ! ನಾನು ನಿನ್ನ ದಾಸಿ!

**ವಿಕ್ರಮ.**—ಲೀಲೆ, ಕೇಳುತಿದೆ ಕೇಳುತಿದೆ ರಣಭೇರಿ! ಇದು ರಣಭೇರಿಯಲ್ಲ; ಮೃತ್ಯುಭೇರಿ. ಚಿತೆಗಳೆಷ್ಟೋ ಕಾಳಿಯ ಕರಾಳಮುಖಗಳಂತೆ ಬಾಯ್ಬಿಟ್ಟು ನಿಂತಿವೆ. ಜೋಹರ್‌ವ್ರತದ ಸೂಚನೆಯಿದು!

**ಲೀಲಾ.**—ವಿಕ್ರಮ! ನಾನೇನು ಮಾಡಬೇಕು ?

**ವಿಕ್ರಮ.**—ಇನ್ನೊಮ್ಮೆ ನಾನು ಬರುವ ವರೆಗೆ ಕಾಳಿಯ ಮಂದಿರವೇ ನಿನ್ನ ವಾಸಸ್ಥಾನವಾಗಿರಲಿ!

**ಲೀಲಾ.**—ಬರುವುದು ನಿಜವಷ್ಟೆ!

**ವಿಕ್ರಮ.**—ಅದು ಭವಾನಿಯ ಇಚ್ಛೆಯಾಗಿದ್ದರೆ—ಪನ್ನೆ ನಿನ್ನ ಗೆಳತಿಯಾಗಿರುವಳು.

**ಲೀಲಾ.**—ಹಸುಗೂಸಾಗಿದ್ದಾಗಲೂ ಅವಳೇ ದಾಸಿ; ಸಾಯು ವಾಗಲೂ ಅವಳೇ! ಹುಂ.

**ವಿಕ್ರಮ.**—ಯುದ್ಧವು ಬೇಗನೆ ಮುಗಿಯುವುದು. ರಜಪೂತ ಸೈನಿಕರ ಸಂಖ್ಯೆ ಐದು ಸಾವಿರ ಮಾತ್ರ!

**ಲೀಲಾ.**—ಅವರ ವಧೆಯಾಗಲು ದಿವಸಗಳು ಬೇಡ.

**ವಿಕ್ರಮ.**—ಒಂದು ವೇಳೆ ನಾನು ಬರಲಿಲ್ಲವಾದರೂ ಕಾಳಿಯ ಸನ್ನಿಧಿಯಲ್ಲಿರುವೆ ನೀನು. ಹೆದರಿಕೆಯಿಲ್ಲ.

**ಲೀಲಾ.**—ಹೆದರಿಕೆಯೆಂಬುದು ಮರೆತೇ ಹೋಯಿತು. ವಿಕ್ರಮ. ಹೌದು; ಆಹೋರುನಗರದ ಪ್ರಕೃತಿಯೇ ಅದು.

**ವಿಕ್ರಮ.**—ತಾಯಿ! ನನ್ನನ್ನು ಬೀಳ್ಕೊಡು.

**ಲೀಲಾ.**—ಹೋಗಿ ಬಾ, ಸಹೋದರ! ನೀನೊಬ್ಬನಾದರೂ ಬಾ! ಪ್ರತೀಕಾರ ಮಾಡೋಣ. ಪ್ರತೀಕಾರಶಬ್ದವನ್ನು ಕೇಳಿದೊಡನೆ ಮೈ ಹೇಗೆ ಬಿಸಿಯೇರುತ್ತದೆ!

**ವಿಕ್ರಮ.**—ತಾಯೇ! ಕ್ಷತ್ರಿಯರಮಣಿಯ ಆಶೀರ್ವಾದ ಫಲಿಸ ದಿರದು. (ಹೋಗುವನು.)

## ದೃಶ್ಯ ೩

[ಅಹೋರಿನ ಕೋಟೆಯೊಳಗೆ ವಿಶಾಲಪ್ರದೇಶ; ದೂರದಲ್ಲಿ ಭಯಂಕರವಾದ ಚಿತೆಗಳು. ರಕ್ತವಸ್ತ್ರಧಾರಿಣಿಯರಾಗಿ, ತುಳಸಿಯ ದಂಡೆಗಳನ್ನು ಕೊರಳಲ್ಲಿಟ್ಟು ಅನೇಕ ಸ್ತ್ರೀಯರು ಕೂಡಿರುವರು. ಅವರ ಮಧ್ಯದಲ್ಲಿ ಮಹಾರಾಜ್ಞಿ.]

**ಮಹಾರಾಜ್ಞಿ.**—ಗೆಳತಿಯರೆ, ಇಂದು ನಮ್ಮ ಕೊನೆಯ ಕೂಟ. ಯಾರೂ ಅಳಬೇಡಿರಿ. (ಗದ್ಗದ ಕಂಠೆಯಾಗುವಳು).

**ಒಬ್ಬಳು.**—ವ್ಯಸನವಿಲ್ಲ, ಮಹಾರಾಜ್ಞಿ.

**ಮಹಾರಾಜ್ಞಿ.**—ನನ್ನೊಬ್ಬಳು ಲೀಲೆಗಾಗಿ, ಅವಳಂತಹ ಅವಳಿಗಿಂತ ಅಮೂಲ್ಯೆಯರಾದ ಎಷ್ಟು ಲೀಲೆಯರನ್ನು

**ಮತ್ತೊಬ್ಬಳು.**—ಹಾಗೆ ಹೇಳಬಾರದು ತಾಯಿ. ದುರ್ಜನಪೀಡಿತವಾದ ಸ್ತ್ರೀವರ್ಗಕ್ಕೆ ಒದವಿದ ವಿಪತ್ತನ್ನು ಪರಿಹರಿಸುವ ಗ್ರಹಶಾಂತಿಯಿದು ತಾಯಿ.

**ಮಹಾರಾಜ್ಞಿ.**— ಹುಡುಗಿಯರೇ, ಒಬ್ಬೊಬ್ಬರಾಗಿ ನನ್ನನ್ನು ಆಲಿಂಗಿಸಿರಿ.

**ಮತ್ತೊಬ್ಬಳು.**—ಧನ್ಯತೆಯಿಂದಲೇ ಸಾಯುತ್ತೇವೆ ತಾಯಿ!

**ಮಹಾರಾಜ್ಞಿ.**—ಸ್ವರ್ಗದಲ್ಲಿ ಮತ್ತೇನೂ ಇರಬಹುದು. ಆದರೆ ಸಮಾನಕಷ್ಟಸುಖಗಳುಳ್ಳ ಗೆಳತಿಯರನ್ನು ಗಾಢಪ್ರೇಮದಿಂದ ಅಪ್ಪುವ ಸುಖ ಅಲ್ಲಿ ದೊರೆಯುವುದೇ ?

**ಎಲ್ಲರೂ.**—ಇಲ್ಲ ಮಹಾರಾಣಿ! ಇಲ್ಲ.

**ಮಹಾರಾಜ್ಞಿ.**—ಸಫಲವಾಗದ ಆಶೆಯೇ ಪುನರ್ಜನ್ಮದ ಬೀಜವೆಂದು ಬಲ್ಲವರು ಹೇಳುತ್ತಾರೆ, ಗೆಳತಿಯರೇ! ಆದುದರಿಂದ ಒಮ್ಮೆ ನನ್ನನ್ನು ಮನವಾರೆ ಆಲಿಂಗಿಸಿರಿ! ಒಂದಾಸೆಯಾದರೂ ಪೂರೈಸಿ ಕರ್ಮಬಂಧವು ಸ್ವಲ್ಪವಾದರೂ ಸಡಿಲಲಿ, ಗೆಳತಿಯರೆ!

(ಒಬ್ಬಳು ಮುಂದೆ ಬಂದು ಅಪ್ಪುವಳು.)

ಎಂತಹ ಸುಖ! ಮೃತ್ಯುವೇದನೆಯೂ ಮರೆತು ಹೋಯಿತು.

(ಮತ್ತೊಬ್ಬಳು ಆಲಿಂಗಿಸುವಳು.)

ಯಾಕೆ ಅಳುವೆ ಹುಡುಗಿ? ಎಷ್ಟೆಂದರೂ ಮನುಷ್ಯ ಜನ್ಮ. ಇದೇ ಅದರ ಚರಮಸೀಮೆ.

(ಮತ್ತೊಬ್ಬಳು ಆಲಿಂಗಿಸುವಳು.)

ನಿಟ್ಟುಸಿರು ಬೇಡ ತಾಯಿ! ಅದು ಧೈರ್ಯಕ್ಕೆ ಹೊಗೆ ಹಿಡಿಯಿಸುತ್ತದೆ. ಇದು ನಿಟ್ಟುಸಿರಲ್ಲ. ಅಪೂರ್ಣವಾದ ಆಸೆಯ ಉಸಿರಿದು. ಪರಲೋಕಯಾತ್ರೆಗೆ ಹೊರಟಿದ್ದೇವೆ, ತಾಯಿ. ಇಂತಹ ಆಸೆಯ ಬುತ್ತಿಗಳನ್ನು ಕಟ್ಟಿಕೊಳ್ಳಬೇಡ.

(ಮತ್ತೊಬ್ಬಳು ಆಲಿಂಗಿಸುವಳು.)

ಬಡ ಹೆಣ್ಣೇ! ಅಮ್ಮ ಎಂದು ಸಂಬೋಧಿಸುವೆಯಲ್ಲ? ಎಲ್ಲರ ಅಮ್ಮನಾದ ಆ ಮಾಯೆ ಕರೆಯುತ್ತಿದ್ದಾಳೆ, ಮಗು. ಆದರೂ ಪ್ರಪಂಚದ ಅಮ್ಮನೇ ಬೇಕು ನಿನಗೆ. ಇದೇ ಮನುಷ್ಯ ಸ್ವಭಾವ. ಮಾತೃಪ್ರೇಮಕ್ಕಿಂತ ಮಿಗಿಲಾದ ಭಾವ ಈ ಪ್ರಪಂಚದಲ್ಲಿಲ್ಲ. ಆದುದರಿಂದಲೇ ಅಗ್ನಿಜ್ವಾಲೆಗೆ ಹಾರುವ ಮೊದಲೇ ಒಮ್ಮೆ ಅಮ್ಮನ ಸ್ಮರಣೆ!

(ಮತ್ತೊಬ್ಬಳು ಆಲಿಂಗಿಸುವಳು.)

ಎಷ್ಟು ಬಿಸಿ ಈ ಕಣ್ಣೀರು? ಹೃದಯದಲ್ಲಿ ಯಾವುದೋ ಒಂದು ಬೆಂಕಿ ಧಗಧಗಿಸುತ್ತಿದ್ದಿತು. ಕಣ್ಣೀರು ಕುದಿದು ಆವಿಯಾಯಿತು! ಹಾ! ಕಷ್ಟ!

(ಮತ್ತೊಬ್ಬಳು ಆಲಿಂಗಿಸುವಳು.)

ಯಾರಮ್ಮ ನೀನು? ನನ್ನ ದಾಸಿಯ ಮಗಳು. ಮದುವೆ ನಿಶ್ಚಯವಾಗಿದ್ದಿತು. ಆ ಮೊದಲೇ ಬಂತು ಪ್ರಲಯ! ಹೆಣ್ಣು ಬಾಳು, ಯಾರೂ ಮೂಸಿ ಕೆಡಿಸದ ಮೊಗ್ಗೆ ಸ್ವರ್ಗಕ್ಕೆ ಮೀಸಲಾಯಿತು.

(ಮತ್ತೊಬ್ಬಳು ಆಲಿಂಗಿಸುವಳು.)

ಎಷ್ಟು ಜನರನ್ನು ಬೇರೆ ಬೇರೆ ಆಲಿಂಗಿಸಲಿ? ಒಂದೊಂದರಲ್ಲಿ ಒಂದೊಂದು ಸುಖ. ಒಂದೊಂದು ಭಾವನೆ. ಆದರೆ ಮೃತ್ಯು ಆ ಭೇದವನ್ನು ಸಹಿಸ ಬಲ್ಲುದೇ? ಇಲ್ಲ; ತಾಯಂದಿರೇ! ಸತ್ತ ಮೇಲೆ ನಿಮ್ಮ ಭಿನ್ನಾಲಿಂಗನಸುಖಗಳು ಸ್ಮರಣೆಯಲ್ಲಿ ಉಳಿಯುವುವೇ? ಇಲ್ಲ ತಾಯಂದಿರೇ! ಆದುದರಿಂದ ಒಮ್ಮೆಯೇ ಎಲ್ಲರೂ ಅಪ್ಪಿಬಿಡಿರಿ.

(ಎಲ್ಲರೂ ಆಲಿಂಗಿಸುವರು.)

ಅಳಬೇಡಿರಿ ಗೆಳತಿಯರೇ! ಚಿತೆಯು ಬಾಯ್ದೆರೆದು ಬೆಂಕಿನಾಲಗೆಗಳನ್ನು ಹೊರ ಹಾಕಿದೆ. ಕಣ್ಣೀರು ಸುರಿಸಬೇಡಿರಿ. ಎಲ್ಲರೂ ದುಮುಕಿಬಿಡೋಣ.

(ಎಲ್ಲರೂ ಅವಳನ್ನು ಹಿಂಬಾಲಿಸುವರು.)

ಲೀಲಾವತಿ! ಹಾ ನನ್ನ ಲೀಲಾವತಿ! ನೀನೆಲ್ಲಿರುವೆ? ನನಗೆ ಹುಚ್ಚೆ? ಸುಮಕೋಮಲವಾದ ನಿನ್ನ ಶರೀರವು ಎಲ್ಲಿಯೋ ಭಸ್ಮ ಕಣಗಳೊಂದಿಗೆ ತಾದಾತ್ಮ್ಯವನ್ನು ಹೊಂದಿರಬೇಕು; ಆ ನಿನ್ನ ಆತ್ಮವೆಲ್ಲಿಯೋ ನಿಂತು ನಮಗೆ ಕೈಸನ್ನೆ ಮಾಡುತ್ತಿರಬೇಕು. ಕೊಡಗೂಸು, ಎಲ್ಲರ ಮುಂದೆ ನಿಲ್ಲಲು ಲಜ್ಜೆ; ಎಲ್ಲಿಯೋ ಏಕಾಂತ ಪ್ರದೇಶದಲ್ಲಿ ಮಾಯವಾಗಿರ ಬೇಕು.



# ಆರನೆಯ ಅಂಕ

## ದೃಶ್ಯ ೧

[ ಆಹೋರಿನ ಕೋಟೆಯೊಳಗೆ; ಮಧುಸೂಧನನ ಪ್ರವೇಶ. ]

**ಮಧುಸೂಧನ.**— ಆಯಿತು ಪೂರ್ಣಾಹುತಿ; ರಜಪೂತರೆಲ್ಲಾ ಸತ್ತರು. ಆಹೋರು ಕೋಟೆಯೊಳಗೆ ಒಂದೇ ಒಂದು ಜೀವಸ್ಪಂದನವಿಲ್ಲ. ಅಂದು ಬಂದಿದ್ದಾಗ ಎಂತಹ ಸಂಭ್ರಮಗಳು! ಇಂದು ಎಂತಹ ನಿಶ್ಶಬ್ದತೆ! ನಮ್ಮ ಜೀವನದ ಪಾಡೇ ಹೀಗೆ. ಒಂದು ದಡದಲ್ಲಿ ಗದ್ದಲ. ಇನ್ನೊಂದು ದಡದಲ್ಲಿ ಶಾಂತಿ. ಇವೆರಡರ ನಡುವೆ ವರ್ಷಗಳು ಪ್ರವಾಹವಾಗಿ ಹರಿಯುತ್ತವೆ.

[ ಎಲ್ಲಿಯೋ ಖಡ್ಗದ ಸದ್ದಾಗುವುದು. ]

(ಆಶ್ಚರ್ಯದಿಂದ) ಏನಿದು ಇನ್ನೂ ಖಡ್ಗದ ಠಣತ್ಕಾರ! ರಜಪೂತರ ಶವಗಳೂ ಖಡ್ಗ ಹಿಡಿದು ಬರುವುವೇ ? (ಸ್ವಲ್ಪ ದೂರ ಹೋಗಿ) ಇಲ್ಲ; ನಾನೇ ಹುಚ್ಚ. ಇನ್ನೆಲ್ಲಿ ರಜಪೂತರು? ಇನ್ನೆಲ್ಲಿ ಅವರ ಖಡ್ಗ? ಮನಸ್ಸೇ ನನ್ನನ್ನು ವಂಚಿಸುತ್ತದೆ. [ಸ್ವಲ್ಪ ನಿಂತು.] ಆಹಾ! ಏಷ್ಟೆಂದರೂ ವ್ಯಸನವಾಗುತ್ತದೆ. ನನ್ನ ಈ ಡೊಳ್ಳು ಬೆಳೆಯ ಬೇಕಾದರೆ ಅಹಮ್ಮದ್ ಶಹನ ಪಾದಪೂಜೆಯೇ ಗತಿ. ಅದುದಕ್ಕೆ ವ್ಯಸನ ಪಡಬಾರದು. ಇಳಿದ ತೆರೆಯ ಆಳವನ್ನು ನೋಡಿ ಸ್ನಾನಮಾಡುವುದುಂಟೇ ? ಏರುವ ತೆರೆಯ ಉನ್ನತಿಯನ್ನು ನೋಡಬೇಕು, ಹಾರಬೇಕು.

[ಅಷ್ಟರಲ್ಲಿ ಖಡ್ಗವನ್ನು ಜಳಪಿಸುತ್ತಾ ಶಾರ್ದೂಲಸಿಂಗನು ಪ್ರವೇಶಿಸುವನು.]

**ಶಾರ್ದೂಲ.**— ಯಾರು ನೀನು ?

**ಮಧು.**— ನಿನ್ನಂತೆಯೇ ಒಬ್ಬ ಮನುಷ್ಯ.

**ಶಾರ್ದೂಲ.**— ನನ್ನಂತಿಲ್ಲ ನೀನು.

**ಮಧು.**— ಹಾಗಾದರೆ ನಾನೇನು ಎರಡು ಕಾಲಿನ ಪಶುವೇ ?

**ಶಾರ್ದೂಲ.**— ಪ್ರಾಣಿವರ್ಗದಲ್ಲಿ ಯಾವುದಕ್ಕೂ ಸೇರಿರಬಹುದು. ಆದರೂ ಬದುಕುವ ಆಸೆಯುಂಟೇ ?

**ಮಧು.**— ಬದುಕಿಕೊಂಡೇ ಇದ್ದೇನೆ. ಆಸೆಯಿಲ್ಲದೆ ಹೀಗಿರುತ್ತೇನೆಯೇ ?

**ಶಾರ್ದೂಲ.**— ನಿನ್ನನ್ನು ನೋಡುವಾಗ ಸಂದೇಹವುಂಟಾಗುತ್ತದೆ.

**ಮಧು.**— ಶಹನ ರಾಯಭಾರಿ ನಾನು.

**ಶಾರ್ದೂಲ.**— ರಾಜ್ಯದ ವಿಚಾರ ಬೇಡ. ಅದರ ಭಾರದ ಗೊಡವೆಯೂ ಬೇಡ. ಹಿಂದಿನಿಂದ ತಪ್ಪಿಸಿದ ಆನೆ ನಾನು. ಹಿಂಡೆಲ್ಲಾ ಚೆದರಿ ಅನಂತ ನಿದ್ರೆಯಲ್ಲಿ ಸುಖಿಸುತ್ತದೆ. ನಾನೂ ಅದನ್ನು ಸೇರಬೇಕು.

**ಮಧು.**— ಅವಶ್ಯವಾಗಿ.

**ಶಾರ್ದೂಲ.**— ಹೆಚ್ಚು ಮಾತಾಡಲು ಅವಸರವಿಲ್ಲ; ಬಂದ ಕೆಲಸವೇನು ?

**ಮಧು.**— ಒಂದೇ ಒಂದು ವಿಷಯವನ್ನು ಕೇಳುತ್ತೇನೆ—

**ಶಾರ್ದೂಲ.**— ಒಂದಲ್ಲ; ಹತ್ತು ಪ್ರಶ್ನೆಗಳನ್ನು ಕೇಳು. ತಕ್ಕ ಉತ್ತರ ಸಿಕ್ಕುವುದು.

**ಮಧು.**— ಈ ನರಮೇಧದಲ್ಲಿ ಆ ರಾಜಕುಮಾರಿ ಉಳಿದಿರುವಳೇ ?

**ಶಾರ್ದೂಲ.**— ಇನ್ನೂ ದುರ್ಬುದ್ಧಿ! ಇದಕ್ಕೆ ತಕ್ಕ ಉತ್ತರವಿದು. (ಎಂದು ಖಡ್ಗದಿಂದ ಹೊಡೆವನು. ಬ್ರಾಹ್ಮಣನು ನೆಲಕ್ಕೊರಗುವನು.)

**ಮಧು.**— ಅಯ್ಯೋ, ನನ್ನನ್ನು ಕೊಂದರು. ಜೀವವಿರುವಂತೆ ಕೊಂದರು. ಬಾಳೆದಿಂಡನ್ನು ತುಂಟ ಹುಡುಗರು ಕಡಿದು ಬಿಸುಡುವಂತೆ ಕಡಿದೊಟ್ಟಿದರು. ಅಯ್ಯೋ ಒಡೆಯ! ನಿನಗೆ ಇನ್ನಾರು ಗತಿ? (ಶಾರ್ದೂಲನು ಹಿಂದೆ ಸರಿದು ಕಿವಿಗೊಟ್ಟು ಕೇಳುವನು.) ಇನ್ನು ನಿನಗಾರುಗತಿ? ಹಾರಕೊಟ್ಟೆ! ಹೀರಕೊಟ್ಟೆ! ಜಹಗೀರು ಕೊಟ್ಟೆ! ಅಯ್ಯೋ! ನೀನು ಕೊಡದುದು ಯಾವುದನ್ನು ?

**ಶಾರ್ದೂಲ.**— ಹಾರಿಹೋಗುವ ಪ್ರಾಣ ಏನೋನೊ ಆಡಿಸುತ್ತದೆ.

**ಮಧು.**— ಲೀಲಾವತಿ! ಯಾಕೆ ಮಗಳೇ ಇಷ್ಟು ಅನಾಹುತಕ್ಕೆ ಕಾರಣವಾದೆ ?

**ಶಾರ್ದೂಲ** (ಸಮೀಪಕ್ಕೆ ಬಂದು.).— ಯಜ್ಞೋಪವೀತವಿದೆ! ಓಹೋ! ಈತನು ಬ್ರಾಹ್ಮಣ. ಸಾಯುವ ಕಾಲಕ್ಕೆ ಒಂದು ಬ್ರಹ್ಮವಧೆಯಾಯಿತು.

**ಮಧು.**— ಯಾರಯ್ಯ ಅದು ? ನನ್ನನ್ನು ಬ್ರಾಹ್ಮಣನೆನ್ನುವಿರಿ ? ಊಹುಂ— ನಾನು ಬ್ರಾಹ್ಮಣನಲ್ಲ, ಈಗ. ಬ್ರಹ್ಮಧರ್ಮವು ಕುಡಿದ ಮದ್ಯ ದಲ್ಲಿ ತೇಲಿಹೋಯಿತು!

**ಶಾರ್ದೂಲ.**— ಪಶ್ಚಾತ್ತಾಪ ಪಡುತ್ತಾನೆ. ಸಾಯುವ ಕಾಲದಲ್ಲಾದರೂ ಪಶ್ಚಾತ್ತಾಪ ಪರಿಶುದ್ಧನಾಗಲಿ!

**ಮಧು.**— ಇಲ್ಲ ರಜಪೂತ! ಸಾಯುವಾಗಲೂ ಪರಿಶುದ್ಧಿಯಿಲ್ಲ. ಸಾಯುಲೂ ಲೀಲೆಯನ್ನು ಹುಡುಕುವ ಉದ್ದೇಶವೇ ಹೇತುವಾಯಿತು. ಅಯ್ಯೋ! ಈ ಯಜ್ಞೋಪವೀತವನ್ನು ಕಡಿದು ಬಿಸುಡು. ನನ್ನಂಥವನೂ ಯಜ್ಞೋಪವೀತಧಾರಣ ಮಾಡಬಹುದೆಂದು ತಿಳಿದರೆ ಅವರು ಅಪಹಾಸ್ಯ ಮಾಡುವರು. ದೇಹವನ್ನು ಮುಸುಲ್ಮಾನರು ಒಯ್ಯಲಿ! ಅವರ ಮಾಂಸ ದಿಂದ ಬೆಳೆದ ದೇಹ ಅವರ ಗೋರಿಗೆ ಹೋಗಿ ಮಲಗಲಿ. ಮೊಳ ಉದ್ದ ಗಡ್ಡದವರು ಬಂದು ಗಡ್ಡದ ಸಿಕ್ಕು ಬಿಡಿಸುತ್ತಾ, ಗಂಟಲನ್ನು ಕೊರೆವ ಪರುಷಾಕ್ಷರಗಳನ್ನು ಉಚ್ಚರಿಸಿ ಏನೋನೋ ಮಂತ್ರ ಹೇಳಲಿ. ಇಲ್ಲಿಗೆ ಬಿಡು ನನ್ನನ್ನು!

**ಶಾರ್ದೂಲ.**—ಬ್ರಾಹ್ಮಣ! ಶಾಂತನಾಗಿ ಸಾಯು. ವ್ಯಸನಪಡ ಬೇಡ.

**ಮಧು.**— ಸಾಯುವ ಮೊದಲೇ ಶಾಂತಿಯೆಲ್ಲಿ ? ಮದ್ಯವು ನಮ್ಮೊಡನೆ ಪರಲೋಕಕ್ಕೂ ಬಾರದಿದ್ದರೆ ಸತ್ತ ಮೇಲೆ ಶಾಂತಿ ದೊರೆಯುವುದು.

**ಶಾರ್ದೂಲ.**— ನಿನಗೆ ನನ್ನಿಂದಾಗಬೇಕಾದ ಅಂತಿಮಸೇವೆಯೇನು?

**ಮಧು.**— ಸೇವೆಯೇನು ? ನನಗೊಬ್ಬಳು ಬೀಬಿ. ಹಾ ಬಡ ಹೆಂಗುಸೆ!

**ಶಾರ್ದೂಲ.**— ಪ್ರಣಯದ ಬಳ್ಳಿಯಲ್ಲಿ ಹೂಬಿಟ್ಟಿತ್ತು; ಅದರ ನೆನಪು!

**ಮಧು.**— ಶಹನಿಗೆಂದು ಹುಡುಕಿ ಹುಡುಗಿಯನ್ನು ಅಜೀಮನಿಗೆ ಕೊಡಿಸಬೇಕೆಂದಿದ್ದೆ. ಅವನಿಗೆ ಇನ್ನಾರು ಗತಿ ? ಒಳೆಯ ಹುಡುಗ.

**ಶಾರ್ದೂಲ.**— ಕುಹುಕತಂತ್ರದ ಬೇರು ಹೇಗೆ ಬಿಟ್ಟಿದೆ ?

**ಮಧು.**— ಅವನಿಗಿನ್ನು ಲೀಲೆ ಬೇಡ. ನನಗೆ ಬೀಬಿ ಬೇಡ.

**ಶಾರ್ದೂಲ.**— ಲೀಲೆ ಕಾಳಿಯಮಂದಿರದಲ್ಲಿರುವಳು. ಏನಾದರೂ ಅಪಾಯವಾದರೆ ? (ಎಂದು ಆ ಕಡೆ ಧಾವಿಸುವನು).

**ಮಧುಸೂಧನ.**— ಬೀಬಿ! ಹೋಗುತ್ತೇನೆ ಹುಡುಗಿ . . . ನೆನಪಾಗುತ್ತದೆ . . . ನಿನ್ನ ನಗೆ . . . ಕಣ್ಣೀರು . . . ಮುನಿಸು . . . ಸೆಣಸು . . ನಿರ್ವಾಹವಿಲ್ಲ. ಹೋಗುತ್ತೇನೆ ಹುಡುಗಿ! . . . .

(ಪ್ರಾಣೋತ್ಕ್ರಮಣ).

## ದೃಶ್ಯ ೨

[ಕಾಳೀಮಂದಿರ; ಶಾರ್ದೂಲ ಮತ್ತು ಲೀಲಾವತಿ]

**ಲೀಲಾವತಿ.**—ಶಾರ್ದೂಲ! ಅಡಗಿದ ಆ ಜ್ಯೋತಿಗಳ ಪ್ರಕಾಶವನ್ನು ಇನ್ನೊಮ್ಮೆ ವರ್ಣಿಸು.

**ಶಾರ್ದೂಲ.**—ವರ್ಣಿಸಿದರೆ ಏನು ಪ್ರಯೋಜನ, ತಾಯಿ ? ಅದರಿಂದ ಲೋಕದ ಕಗ್ಗತ್ತಲೆಯ ನೆನಪು ಮತ್ತಷ್ಟು ತೀವ್ರವಾಗಿ, ಜೀವನದಲ್ಲಿ ಮತ್ತಷ್ಟು ತಾತ್ಸಾರವಾಗುವುದು, ತಾಯಿ!

**ಲೀಲಾವತಿ.**—ಆಗಲಿ ತಾತ್ಸಾರ. ನಾವು ಅಂತಹ ಕಾರ್ಯಗಳನ್ನೇನು ಮಾಡಿದ್ದೇವೆ ? ನಮ್ಮ ಜೀವನದಲ್ಲಿ ಜುಗುಪ್ಸೆಯುಂಟಾಗುವಷ್ಟು ಅವರ ಪೌರುಷವನ್ನು ಕೊಂಡಾಡು, ಶಾರ್ದೂಲ!

**ಶಾರ್ದೂಲ.**— ವರ್ಣನೆಯಲ್ಲ ಸಹೋದರಿ; ಇದು ಕಂಡ ವಿಷಯ.

**ಲೀಲಾವತಿ.**—ಸತ್ಯವಾಗಿದ್ದರೂ ಇದನ್ನು ಕೇಳುವಾಗ ಕಥಾಸಾಮ್ರಾಜ್ಯದಲ್ಲಿ ತಿರುಗಾಡುತ್ತಿರುವೆವೆಂಬಂತೆ ಭಾಸವಾಗುತ್ತದೆ. ಹಾ ತಂದೆ, ನಿನಗೆಂತಹ ಮರಣ ? ಹಾ ಸಹೋದರ, ನಿನಗೆಂತಹ ಮುಕ್ತಿ! ವಿಕ್ರಮ! ನಿನಗೆಂತಹ ವೀರಶ್ರೀಸಂಗ ! ಬದುಕಿರುವ ನಾವೇ ಅಪರಾಧಿಗಳು

**ಶಾರ್ದೂಲ.**—ಯುದ್ಧವು ಪ್ರಚಂಡವಾಗಿ ನಾಲ್ಕು ದಿನ ನಡೆಯಿತು. ಹರಿವ ರಕ್ತದ ಕೋಡಿಗೆ ಯುದ್ಧಭೂಮಿಯ ವಿಸ್ತಾರವು ಸಾಲದಾಯಿತು.

**ಲೀಲಾವತಿ.**—ಹುಂ; ಮತ್ತೆ.

**ಶಾರ್ದೂಲ.**—ಐದನೆಯ ದಿನ ಸೂರ್ಯೋದಯವಾಯಿತು ತಾಯಿ! ಸತ್ತವೀರರ ರಕ್ತದಲ್ಲಿ ಓಕುಳಿಯಾಡಿದಂತೆ ಸೂರ್ಯನು ಆರಕ್ತನಾಗಿದ್ದನು. ಯಜ್ಞಕುಂಡದಲ್ಲಿ ದೇಹಸಮರ್ಪಣಮಾಡಿದ ವೀರನಾರಿಯರ ಹಣೆಯ ಕುಂಕುಮವನ್ನು ಲೇಪಿಸಿದಂತೆ ಆತನು ಕೆಂಬಣ್ಣದ ಕಿರಣಗಳನ್ನು ಕಾರುತಿದ್ದನು. ಅದೇ ಕೊನೆಯ ಸಂಗ್ರಾಮ. 'ಮೊದಲೂ ಇಂತಹ ಸಮರವಾ

ಗಿರಲಿಲ್ಲ. ಇನ್ನೂ ಆಗುವಂತಿಲ್ಲ. ಕಣ್ತುಂಬ ನೋಡಿಬಿಡುತ್ತೇನೆ' ಎನ್ನುವಂತೆ ಸೂರ್ಯನು ಪ್ರಚಂಡಶೋಭೆಯಿಂದ ಮಿರುಗುತ್ತಿದ್ದನು.

**ಲೀಲಾವತಿ.**—ಸರಿ. ಸೂರ್ಯನ ಮುಖವನ್ನು ಕರ್ನೋಡಗಳು ಆವರಿಸಲಿಲ್ಲ. ಜಗಚ್ಚಕ್ಷುವಿಗೂ ಗೊತ್ತಿದೆ ವೀರರಜಪೂತರನ್ನು ಹೇಗೆ ಬೀಳ್ಕೊಡಬೇಕೆಂದು.

**ಶಾರ್ದೂಲ.**—ಮತ್ತೇನು ? ತುಮುಲ ಯುದ್ಧ. ಪರ್ವತ ಸಿಂಗನು ಬೆಳ್ಗೊಡೆ ಹಿಡಿದು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ಮುಪ್ಪಿನಲ್ಲಿಯೂ ಯೌವನದ ಪ್ರತಾಪವನ್ನು ತೋರಿಸಿದನು.

**ಲೀಲಾವತಿ.**—ಪಿತನೇ, ನೀನೇ ಧನ್ಯನು!

**ಶಾರ್ದೂಲ.**—ಅಕಸ್ಮಿಕವಾಗಿ ಒಂದು ಬಾಣವು ಅವನೆದೆಯನ್ನು ನಾಟಿತು, ಅವನ ಪ್ರಾಣವಾಯುವನ್ನು ಅಪಹರಿಸಿತು.

**ಲೀಲಾವತಿ.**—ಮಹಾಪುರುಷರ ಅಂತರ್ಧಾನವೇ ಹೀಗೆ! ಆಶ್ಚರ್ಯವಿಲ್ಲ.

**ಶಾರ್ದೂಲ.**—ಇಷ್ಟರಲ್ಲಿ ರಾಮಸಿಂಗನು ಅದೇ ಅಂಬಾರಿಯನ್ನೇರಿ, ತಂದೆಯ ಶವವನ್ನು ನೆಲಕ್ಕುರುಳಿಸಿ, ಶಹನ ಸಮ್ಮುಖದಲ್ಲಿ ನಿಂತು, ಸಿಂಹ ಗರ್ಜನೆ ಮಾಡಿದನು. ಇದುವರೆಗೆ ತಂದೆಗೆ ಇದಿರಾಡಿ ತಿಳಿಯದ ವಿನೀತ ಪುತ್ರನಾದರೂ, ಇಂದು ಅವಿನಯವನ್ನಾಚರಿಸಿ ಒಂದು ಗಳಿಗೆಯಾದರೂ ಶ್ವೇತಚ್ಛತ್ರವನ್ನು ಕಾಪಾಡಿದ. ಅಹಮ್ಮದ್ ಶಹನನ್ನು ಕಾಣುತ್ತಲೇ ಧುಡುಮ್ಮನೆ ನೆಲಕ್ಕೆ ಹಾರಿ, ಆತನ ಆನೆಯ ಉದರವನ್ನು ಬರ್ಚಿಯಿಂದಿರಿದು, ಆ ಪರ್ವತಕಾಯವನ್ನು ನೆಲಕ್ಕುರುಳಿಸಿದಾಗ, ಒಮ್ಮೆ ರಣರಂಗವು ಜಯಕಾರಗಳಿಂದ ಕಂಪಿಸಿತು. ಕುಸಿದು ಬಿತ್ತು. ಯೋಧರ ಎದೆ ತಲ್ಲಣಿಸಿತು. ಕಾಡನ್ನು ಕಬಳಿಸುವ ಕಿಚ್ಚು ಮರದಿಂದ ಮರಕ್ಕೆ ಲಂಘಿಸಿ ನಿಮಿಷ ಮಾತ್ರದಲ್ಲಿ ಕೆಂಡದ ರಾಶಿಯನ್ನು ಮಾಡುವಂತೆ ರಜಪೂತವೀರರೆಲ್ಲಾ ರೌದ್ರೋನ್ಮತ್ತತೆಯಿಂದ ಕಾದಾಡಿ, ಶಹನ ಸೈನಿಕರನ್ನು ಮಲಗಿಸಿದರು. ಅಷ್ಟರಲ್ಲಿ ರಾಮಸಿಂಗನು ಮೃತ್ಯುಧಾರಾ ಎಂಬ ಖಡ್ಗದಿಂದ ಶಹನ ಕಂಠವಿಚ್ಛೇದವನ್ನು ಮಾಡಿ, ತನ್ನ ರಕ್ತಧ್ವಜಕ್ಕೆ ಬಣ್ಣ ಹೆಚ್ಚಿಸುತ್ತಿದ್ದನು; ತಾಯಿ! ಆದರೆ

ಮಾಡುವುದೇನು ? ಯಾರೋ ಒಬ್ಬ ಮುಸಲ್ಮಾನನು ಹಿಂದಿನಿಂದ ಬಂದು ಆತನ ಕೈಗಳನ್ನು ಕಡಿದುಬಿಟ್ಟನು, ತಾಯಿ!

**ಲೀಲಾವತಿ.**—ಹಾ! ಸಹೋದರ! ಎಂತಹ ಮರಣ ನಿನಗೆ. ದುಃಖನಾಟಕಗಳು ಅವಸಾನ ಹೊಂದುವ ಕ್ರಮವೇ ಹೀಗೆ. ಆಗ ಬೇಕಾದಂತೆ ಆಯಿತು.

**ಶಾರ್ದೂಲ.**—ವಿಕ್ರಮಸಿಂಹನ ಪ್ರಪಂಚವೇ ಬೇರೆ. ಅಜೀಮ್ ಖಾನನ ಮಹಾಸೈನ್ಯಸಾಗರಕ್ಕೆ ದುಮ್ಮಿಕ್ಕಿ, ಆತನಿದ್ದಲ್ಲಿಗೆ ಸಿಂಹದ ಮರಿಯಂತೆ ಹಾರಿ, ಅವನನ್ನು ನೆಲಕ್ಕುರುಳಿಸಿ, ವಕ್ಷಃಸ್ಥಳದಲ್ಲಿ ಕುಳಿತು ತನ್ನ ಕೃಪಾಣವನ್ನೂರಿದ. ಆತನ ಬಿಸಿ ರಕ್ತವನ್ನು ಕುಡಿದ ಖಡ್ಗವು ಆರ್ಭಟಿಸಿತು. ಅಷ್ಟರಲ್ಲಿ ಇನ್ನು ಹೇಳಬೇಕಾದುದೇನು ತಾಯಿ ?

**ಲೀಲಾವತಿ.**—ಆ ದೀಪವೂ ನಂದಿತು, ಅಲ್ಲವೇ ?

**ಶಾರ್ದೂಲ.**—ಕೊನೆಯ ವರೆಗೆ ಆತನ ಬಳಿಯಲ್ಲಿದ್ದವ ನಾನು! ತನ್ನ ಒರೆಯಿಂದೊಂದು ಖಡ್ಗವನ್ನೆಳೆದು “ಹಾ! ನನ್ನ ಜೀವದ ಗೆಳೆಯ! ನನ್ನ ಸಂದೇಶವೊಂದನ್ನು ಒಯ್ಯಬೇಕು. ಲೀಲಾವತಿಯಲ್ಲಿ ನನಗಿದ್ದ ನಿರ್ಮಲ ಪ್ರೀತಿಗೆ ನೀನೊಬ್ಬನೇ ಸಾಕ್ಷಿ. ನಮ್ಮಿಬ್ಬರ ಎದೆಗಳು ಈ ಖಡ್ಗ ಧಾರೆಯಲ್ಲಿ ಸಂಚರಿಸಿ ಪರಸ್ಪರ ಪ್ರೇಮವನ್ನು ಕಲಿತುವು. ನನ್ನ ಅಂತಿಮ ಕಾಲವು ಹೇಗೆ ಬಂತೆಂಬುದನ್ನು ನೀನೇ ತಿಳಿಸು” ಎಂದು ಖಡ್ಗವನ್ನು ನನ್ನ ಕೈಗಿತ್ತನು (ಖಡ್ಗವನ್ನು ಒಪ್ಪಿಸುವನು).

**ಲೀಲಾವತಿ.**—ಹಾ ನನ್ನ ಖಡ್ಗವೇ! ಆತನ ಕೆಲಸವನ್ನು ಮಾಡಿಸಿದೆ. ನನ್ನದಿನ್ನೂ ಆಗಿಲ್ಲ. (ಎಂದು ನಿಟ್ಟುಸಿರು ಬಿಡುವಳು).

**ಶಾರ್ದೂಲ.**—ಕೋಟೆಯ ಸಂರಕ್ಷಣೆಗೆ ಮಹಾರಾಜರು ನನ್ನನ್ನು ನೇಮಿಸಿದ್ದರು. ಇನ್ನು ಯಾವುದನ್ನು ರಕ್ಷಿಸಲಿ? ಈ ಮಣ್ಣ ರಾಶಿಯನ್ನೇ? ರಜಪೂತ ರಮಣಿಯರ ಅಸ್ಥಿಮಾಂಸವನ್ನು ತಿಂದು, ರಕ್ತವನ್ನು ಕುಡಿದು, ಹೊಗೆ ಕಾರುವ ಈ ಚಿತೆಗಳನ್ನೇ! ಹೊಗೆಯಿಂದ ಕಪ್ಪಾದ ಈ ಮರಗಳನ್ನೇ! ದೇವಿ! ನನಗೆ ಅಪ್ಪಣೆ ಕೊಡು.

**ಲೀಲಾವತಿ.**—ಇನ್ನು ಅಪ್ಪಣೆಯೇನು, ಶಾರ್ದೂಲ? ಎಂದೋ [illegible]

[ಅಷ್ಟರಲ್ಲಿ 'ಅಲ್ಲಾ ಹೋ ಅಕ್ಬರ್' ಎಂಬ ಜಯಧ್ವನಿ ಕೇಳುವುದು]

**ಶಾರ್ದೂಲ.**—ಕೆಟ್ಟೆವು, ತಾಯಿ, ಕೆಟ್ಟೆವು! ಇಲ್ಲಿಗೂ ಬಂದುವು ಹಸಿದ ತೋಳಗಳು.

**ಲೀಲಾವತಿ.**—ಬದುಕಿದೆ ಎಂದು ಹೇಳು. ಈಗ ವೀರರಂತೆ ಸಾಯ ಬಹುದು. ಇಲ್ಲದಿದ್ದರೆ ಆತ್ಮಹತ್ಯೆ ಮಾಡಬೇಕಾಗುತ್ತಿತ್ತು.

**ಶಾರ್ದೂಲ.**—ನಿಜ ತಾಯಿ. ಆದರೆ ನಿನ್ನನ್ನು ಬಿಟ್ಟು ಹೇಗೆ ಹೋಗಲಿ?

**ಲೀಲಾವತಿ.**—ನಡೆ ಶಾರ್ದೂಲ! ನಡೆ! ನನ್ನ ಸಂರಕ್ಷಕನನ್ನು ನೋಡಿದೆಯೋ? (ಎಂದು ಖಡ್ಗವನ್ನು ತೋರಿಸುವಳು).

**ಶಾರ್ದೂಲ.**—ಕಾಳೀಮಂದಿರವನ್ನು ಪ್ರವೇಶಿಸಿದರು! ಬಂದರು!
(ಎನ್ನುತ್ತಾ ಹೋಗುವನು).

[ಲೀಲಾವತಿಯನ್ನು ತುರುಷ್ಕ ಸೈನಿಕರು ಸೆರೆಹಿಡಿವರು. ಶಾರ್ದೂಲನು ಅನೇಕ ಸೈನಿಕರನ್ನು ಕೊಂದು ಮುಂದುವರಿಯುವನು.].

## ದೃಶ್ಯ ೩

[ಆಹೋರು ಶಹನ ವಶವಾಗಿ ಎರಡು ದಿವಸಗಳಾಗಿವೆ. ಕೆಲಮಂದಿ ಅಧಿಕಾರಿಗಳೂ ಸೈನಿಕರೂ ಒಡ್ಡೋಲಗ ಸಾಲೆಯನ್ನು ಪ್ರವೇಶಿಸುವರು.]

**ಒಬ್ಬ.**—ದೊಡ್ಡ ಬೇಟೆಯಾಡಿ ಗಡ್ಡ ಕೆಂಪಾಯಿತು, ಕಾಸಿಮ್!

**ಮತ್ತೊಬ್ಬ.**—ಇದು ವರೆಗೆ ಕಟ್ಟಿಟ್ಟ ತಮಾಷೆ ಒಂದೊಂದೇ ಹೊರ ಬೀಳುತ್ತದೆ.

**ಮೊದಲಿನವ.**—ತಮಾಷೆಯಲ್ಲ, ಕಾಸಿಮ್, ಸತ್ಯ!

**ಎರಡನೆಯವ.**—ಅಲ್ಲ ಎಂದರೇನು ?

**ಮೊದಲಿನವ.**—ನೋಡು ನಮ್ಮ ಮೊಳ ಉದ್ದದ ಗಡ್ಡಗಳನ್ನು! ಎಂತಹ ಕೆಂಬಣ್ಣವಿದೆ! ರಜಪೂತರ ರಕ್ತದಲ್ಲಿ ಮಿಂದ ಈ ಗಡ್ಡಗಳಿಗೆ ಇನ್ನು ನಾವು ಸಾಯುವ ತನಕ ಕೆಂಬಣ್ಣ ಬಳಿಯ ಬೇಕಾಗಿಲ್ಲ

**ಎರಡನೆಯವ.**—ಎಂಥ ಅನರ್ಥವಚನ ?

**ಮೊದಲಿನವ.**—ಅನರ್ಥವೇ ಸರಿ ಇಲ್ಲವಾದರೆ ನಮ್ಮ ಪ್ರಯತ್ನ ವೆಲ್ಲಾ ಹೀಗೆ ವ್ಯರ್ಥವಾಗುತ್ತಿರಲಿಲ್ಲ.

**ಮತ್ತೊಬ್ಬ.**—ಕೋಟೆ ನಮ್ಮ ವಶವಾಗಿದೆ. ಇದು ವ್ಯರ್ಥವೇ ?

**ಮೊದಲಿನವ.**—ಕೋಟೆಯ ಬಂಡೆಕಲ್ಲುಗಳೆಲ್ಲಾ ನಮ್ಮ ವಶ. ಬೇಕಾದರೆ ತಲೆಯನ್ನು ಹೊಯ್ದು ಕೊಳ್ಳಬಹುದು!

**ಮತ್ತೊಬ್ಬ.**—ಅಣ್ಣ, ನೀನು ಹೇಳಿದ ಮಾತು ಸರಿ. ನಾವು ಎಷ್ಟೋ ಶತ್ರುನಗರಗಳನ್ನು ಸೂರೆಮಾಡಿದ್ದೇವೆ. ಸುಲಿಯುವುದಕ್ಕೆ ಬೇಕಾದಷ್ಟು ಧನ, ಕುಡಿಯುವುದಕ್ಕೆ ಬೇಕಾದಷ್ಟು ಮದ್ಯ ಇಷ್ಟು ಎಲ್ಲಿಯೂ ಸಿಕ್ಕದಿರಲಿಲ್ಲ. ಇಲ್ಲಿ ಸುಲಿಗೆ ಮಾಡುವುದೇನು ? ಚಿತೆಗಳಲ್ಲಿ ಅರೆಬೆಂದು ನಾರುತ್ತಿರುವ ಎಲುಬುಗಳನ್ನೇ ?

**ಮತ್ತೊಬ್ಬ.**—ಸೂರೆಯ ವಸ್ತುಗಳ ಸಾರವೊಂದನ್ನು ಮರೆತು ಬಿಟ್ಟೆ ನೀನು!

**ಮೊದಲಿನವ.**—ಯಾವ ಯುದ್ಧದಲ್ಲಿ ವೀರರಿಗೆ ಒಂದೊಂದು ಪೋರಿಯಾದರೂ ದೊರೆಯುವುದಿಲ್ಲವೋ ಅದು ಯುದ್ಧವೇ ಅಲ್ಲ.

**ಮತ್ತೊಬ್ಬ.**—ಸತ್ಯ ಹೇಳಿದೆ. ಸತ್ಯವನ್ನು ಮುಟ್ಟಿ ಮೂದಲಿಸಿದೆ. ಯುದ್ಧದಲ್ಲಿ ಖಡ್ಗಬಾಣಗಳ ಪೆಟ್ಟು ತಿಂದು, ಹುಣ್ಣಾದ ನಮ್ಮ ದೇಹದ ಬೇನೆಯನ್ನು ಇಲ್ಲಿ ನೊಣಗಳಷ್ಟೆ ಆರಿಸಬೇಕು ?

**ಅಧಿಕಾರಿ.**—ಎಂಥ ಮರುಳಪ್ಪ ಇದು ? ಬದುಕಬೇಕೆಂದು ಯುದ್ಧ ಮಾಡುವುದು! ಈ ರಜಪೂತರಂತೆ ಸಾಯುವುದಕ್ಕಲ್ಲ.

**ಮತ್ತೊಬ್ಬ.**—ಮರುಳೊ ಹುರುಳೊ, ಸಾಯದಿರುತಿದ್ದರೆ ಕೊಳ್ಳೆ ಗಳೆಷ್ಟೋ ದೊರೆಯುತ್ತಿದ್ದುವು.

**ಸೈನಿಕ.**—ಹೆಂಗುಸರನ್ನು ಬೆಂಕಿಗೆ ದೂಡುವವರು ರಾಕ್ಷಸರೇ ಸರಿ.

**ಮತ್ತೊಬ್ಬ.**—ಅದರಲ್ಲಿ ಬಾಳೆಯ ಕಂದುಗಳಂತಹ ಸುಂದರ ರೂಪಗಳನ್ನು!

**ಇನ್ನೊಬ್ಬ.**—ಹೂ, ಚಿಗುರು, ಬಳ್ಳಿ ಎಂದಿಲ್ಲದೆ ಎಲ್ಲವನ್ನೂ ಕಡಿದು ಒಲೆಯೊಳಗೆ ಒಟ್ಟುವುದು!

**ಮತ್ತೊಬ್ಬ.**—ನಿಜವಾಗಿ ವ್ಯಸನವಾಗುತ್ತದೆ ನಿನ್ನೆ ಹೆಣ್ಣುರೂಪ ವನ್ನು ಹೊಂದಿದವರು ಇಂದು ಭಸ್ಮರಾಶಿಯಾದರಲ್ಲಾ ಎಂದು.

**ಮೊದಲಿನವ.**—ಬೂದಿಯನ್ನು ಕೆದರಿ ಹುಡುಕಿದರೂ ಒಂದೇ ಒಂದು ಹೆಂಗಸು.

**ಇನ್ನೊಬ್ಬ.**—ಒಂದು ಗುಟುಕಾದರೂ ಹೆಂಡ ದೊರೆಯಲಿಲ್ಲವಲ್ಲಾ! ಎಂದು.

**ಮತ್ತೊಬ್ಬ.**—ನಮ್ಮ ಬುತ್ತಿಯನ್ನೇ ಬಿಚ್ಚಿ ಈ ಸ್ಮಶಾನದಲ್ಲಿ ಹೊಟ್ಟೆ ತುಂಬಿಸ ಬೇಕಾಯಿತಲ್ಲಾ ಎಂದು.

## ದೃಶ್ಯ ೪

[ಆಗ ಕೆಲವರು ಅರಮನೆಯನ್ನು ಶೋಧಿಸಿ ಕನ್ಯಾಂತಃಪುರವನ್ನು ಪ್ರವೇಶಿಸುವರು.]

**ಒಬ್ಬ ಸೈನಿಕ.**—ಇದೇನು ಮಾಟ? ಗೋಡೆಯಲ್ಲಿ ಹೆಣ್ಣು.

**ಇನ್ನೊಬ್ಬ.**—ಯಾವುದೊ ಒಂದು ಹೆಂಗಸು ಗೋಡೆಯಲ್ಲಿ ನೇಣು ಹಾಕಿ ಪ್ರಾಣ ಬಿಟ್ಟಿದೆ.

**ಮತ್ತೊಬ್ಬ.**—ಎಂಥ ಮೂಢರು ನೀವು! ಅದು ಹೆಂಗಸಲ್ಲ; ಚಿತ್ರ!

**ಮೊದಲನೆಯವ.**—ಇಷ್ಟು ದೊಡ್ಡ ಚಿತ್ರ! ಇದು ವಿಚಿತ್ರ!!

**ಎರಡನೆಯವ.**—ಹೌದು; ದೇಹಪ್ರಮಾಣದ ಚಿತ್ರ.

**ಮೊದಲನೆಯವ.**—ಹಾಗಾದರೆ ಈ ರಾಜನ ಪಟ್ಟದರಸಿಯ ಚಿತ್ರ.

**ಎರಡನೆಯವ.**—ಅಲ್ಲವೋ ಮೂರ್ಖ. ಹದಿನಾರೋ ಹದಿನೇಳೋ ವರ್ಷದ ಜಿಂಕೆಮರಿಯಿದು.

**ಮೊದಲನೆಯವ.**—ವಯಸ್ಸು ಕಡಿಮೆಯಾದರೆ ರಾಜನಿಗೆ ಮತ್ತಷ್ಟು,

**ಮತ್ತಿನವ.**—ರಾಜನನ್ನು ನೋಡಲಿಲ್ಲವೇ ನೀನು? ಅವನ ವರ್ಷ ಐವತ್ತೊ ಅರುವತ್ತೊ? ಅಂತಹ ಮುದಿ ಗೂಗೆಗೆ ಈ ಗಿಳಿಮರಿ ಹೆಂಡತಿಯೋ?

**ಮೊದಲನೆಯವ.**—ರಾಜರ ದರಬಾರಿದು. ಗಿಳಿಮರಿಗಳು ಹಾರುತ್ತಿರ ಬೇಡವೇ?

**ಎರಡನೆಯವ.**—ಖಂಡಿತವಾಗಿ ಇದು ರಾಣಿಯ ಚಿತ್ರವಲ್ಲ.

**ಮೊದಲನೆಯವ.**—ಏತರಿಂದ?

**ಎರಡನೆಯವ.**—ಅಲ್ಲನ ಮಕ್ಕಳಷ್ಟು ಕಾಫರರು ರಸಿಕರಲ್ಲ.

**ಮೊದಲನೆಯವ.**—ಹಾಗಾದರೆ ಇವಳಾರು?

**ಎರಡನೆಯವ.**—ರಾಜಕುಮಾರಿಯಾಗಿರಬೇಕು.

**ಮೊದಲನೆಯವ** (ಸ್ವಲ್ಪಕಾಲ ಎವೆಯಿಕ್ಕದೆ ನೋಡಿ).— ಓಹೋ ತಿಳಿಯಿತು! ಇದು ಆ ಪೋರಿ. ಅಲ್ಲಿ ಸೆರೆಯಲ್ಲಿದ್ದಾಳೆ. ಅವಳ ಚಿತ್ರ!

**ಎರಡನೆಯವ.**— ಇವಳೇ ಅಲ್ಲಿ ಸೆರೆಯಲ್ಲಿದ್ದಾಳೆ. ಅವಳೇ ಇಲ್ಲಿ ಚಿತ್ರದಲ್ಲಿದ್ದಾಳೆ.

**ಮೂರನೆಯವ.**— ಹಾಗಾದರೆ ಇವಳೂ ರಾಜಪುತ್ರಿ! ಅವಳೂ ರಾಜಪುತ್ರಿ!

**ಮತ್ತೊಬ್ಬ.**— ಅದೇನೋ ಬರೆದಿದೆ ಚಿತ್ರದ ಕೆಳಗೆ!

**ಮೊದಲನೆಯವ.**— ಹೌದು; ಲೀ ಲಾ ವ ತಿ !

**ಎಲ್ಲರೂ ಸಂತೋಷದಿಂದ.**— ಮೃಗ ಸಿಕ್ಕಿತು. ರಾಜರಿಗೆ ತಿಳಿಸೋಣ.

**ಮೂರನೆಯವ.**— ಎಂಥ ಹೆಸರು? ಲ-ಲಾ-ಲೀಲಾವತಿ! ಎಳೆದಷ್ಟು ಉದ್ದ. ಕಿವಿಗೆ ಮೆದು. ಮಯಣದಿಂದ ಮಾಡಿದ ಹೆಸರು ಉದ್ದುದ್ದ ಬರುತ್ತದ.

[ಅಲ್ಲಾಹೋ ಅಕ್ಬರ್ ಎಂದು ಜಯಧ್ವನಿ ಮಾಡುತ್ತಾ ಹೋಗುವರು.]

## ದೃಶ್ಯ ೫

[ಆಹೋರಿನ ಕೋಟೆಯೊಳಗೆ ಒಂದು ಶಿಬಿರ. ಅಹಮ್ಮದ್ ಶಹ;
ಒಬ್ಬ ಸೈನ್ಯಾಧಿಕಾರಿ.]

**ಶಹ.**— ಅಲ್ಲನ ಮಕ್ಕಳ ಅರ್ಧಚಂದ್ರಧ್ವಜವಿರುವಲ್ಲಿ ಅಪಜಯವು ಸುಳಿದಾಡುವಂತಿಲ್ಲ. ರಜಪೂತರನ್ನು ಬಾಳೆದಿಂಡಿನಂತೆ ತುಂಡಿಸಿದೆವು.

**ಅಧಿಕಾರಿ.**— ಹೌದು ಖಾವಂದ! ಅಲ್ಲನ ಅನುಗ್ರಹವಿದ್ದವರ ಎದೆ ವಜ್ರದ ಎದೆ.

**ಶಹ.**— ಹಾಗಾಯಿತಲ್ಲ. ಆದರೇನು? ಈ ವಿಲಯಪ್ರವಾಹದಲ್ಲಿ, ನಮ್ಮ ಕೈಗೆ ಬರಬೇಕಾದ ವಸ್ತುವೂ ತೇಲಿಹೋಯಿತೆಂದು ತೋರುತ್ತದೆ.

**ಅಧಿಕಾರಿ.**— ಹಾಗೆಯೆ ತೋರುತ್ತದೆ ಬುದಿ! ಅಲ್ಲನ ದಯೆಯಿದ್ದರೆ ಏನು ತಾನೆ ಅಸಾಧ್ಯ?

**ಶಹ.**— ಈ ಅಂಗೈಯಗಲದ ಕೋಟೆ ನಮಗೇಕೆ ರಹೀಮ್! ಸಿಂಧದ ಬಾದಶಹನಿಗೆ ಭೂಮಂಡಲವನ್ನೇ ಕೊಟ್ಟಿದ್ದಾನೆ ಅಲ್ಲ! ನಾವೇನು ಕೋಟೆಗಳನ್ನು ಕಾಣದವರೇ? ಅರಮನೆಯಲ್ಲಿ ವಾಸಿಸದವರೇ? ಈ ಕಲ್ಲು ಪೊದರುಗಳನ್ನು ತುಳಿದು, ಅನ್ನಪಾನಗಳನ್ನುಳಿದು, ದೇಹವನ್ನು ಬತ್ತಿಸಿ, ಬತ್ತಿಯಂತೆ ಕೃಶಮಾಡಿದುದಕ್ಕೆ ತಕ್ಕ ಪ್ರಯೋಜನ ದೊರೆಯಲಿಲ್ಲ.

**ಅಧಿಕಾರಿ.**— ಸತ್ಯ ಖಾವಂದರೆ, ಹಟಕ್ಕೆ ಮದ್ದಿಲ್ಲವಂತೆ. ಈ ರಜಪೂತರ ಸ್ವಭಾವವು ಬೆಂಕಿಯಂತೆ. ತಾವು ನಂದುವಾಗ ತಮ್ಮ ಸಮೀಪದಲ್ಲಿರುವವರೂ ಸುಟ್ಟು ಭಸ್ಮವಾಗಬೇಕು.

**ಶಹ.**— ಅದೇ ಹೇಳುತ್ತೇನೆ. ಅದೋ ಕೇಳು! ವಿಜಯಭೇರಿಯು ಕಿವಿಗೆಷ್ಟು ಕರ್ಕಶವಾಗಿದೆ!

**ಅಧಿಕಾರಿ.**— ಹಾಗೆಯೇ ಸರಿ. 'ಜಯ' ಎಂಬ ಶಬ್ದಕ್ಕೆ ಯಾರೂ ಮೋಹಗೊಳ್ಳುವುದಿಲ್ಲ. ಉದ್ದೇಶ ಸಿದ್ಧಿಯಾಗುವುದೇ ಜಯದ ಯಥಾರ್ಥ ಲಕ್ಷಣ.

**ಶಹ.**—ಕಾಡನ್ನುರಿಸಿ ಮೊಲವನ್ನು ಹುಡುಕಿದಂತಾಯಿತು.

**ಅಧಿಕಾರಿ.**—ಹೌದು ಬುದಿ! ಆದರೆ ಹೇಳುವುದು ಹೇಗೆ? ಅಲ್ಲನ ಕೃಪೆಯಿಂದ ಆ ಹುಡುಗಿ ಎಲ್ಲಾದರೂ ಅವಿತಿರಬಹುದು.

**ಶಹ.**—ಇದು ಸುಳ್ಳು ರಹೀಮ್! ಬೆಂಕಿಗೆ ಹಾರುವವರು ತಲೆ ಮರೆಯಿಸಿಕೊಳ್ಳುವರೇ?

**ಅಧಿಕಾರಿ.**—ಅದೂ ನಿಜ.

**ಶಹ.**—ಒಟ್ಟಾರೆ ಈಗ ವಿಚಾರಿಸುವಲ್ಲಿ, ಯುದ್ಧ ಹೂಡಿದುದು ತಪ್ಪೆಂದು ಕಾಣುತ್ತದೆ.

**ಅಧಿಕಾರಿ.**—ತಪ್ಪು! ಎಂದೂ ಅಲ್ಲ. ಶತ್ರುನಾಶವಾಯಿತು.

**ಶಹ.**—ಏನು ಫಲ ರಹೀಂ? ಪರ್ವತನು ಇದ್ದಾಗ ಈ ಸೀಮೆಗೆ ಒಂದು ಪರ್ವತದಂತೆಯೇ ಇದ್ದ. ಪರಕೀಯರ ಬಾಧೆಯಿರಲಿಲ್ಲ. ಕಪ್ಪ ಬರುತ್ತಿತ್ತು. ಕಾಣಿಕೆ ಬರುತ್ತಿತ್ತು. ಪ್ರಬಲ ಸಾಮಂತರಾಜನಾಗಿದ್ದ. ಅದರಿಂದ ನಮ್ಮ ಆಧಿರಾಜ್ಯಕ್ಕೆ ಒಂದು ಖ್ಯಾತಿಯೂ ಇತ್ತು. ಈ ಯುದ್ಧವು ಅದನ್ನೆಲ್ಲಾ ನೆಲಸಮಮಾಡಿತು, ರಹೀಮ್! ಅಂತರಂಗದಲ್ಲಿ ಆತನು ಶತ್ರುವೇ ಆಗಿದ್ದರೂ, ಗುಣಾವಗುಣಗಳನ್ನು ತುಲನೆಮಾಡುವಾಗ ಅವನ ನಾಶವು ನಮಗೆ ಶ್ರೇಯಸ್ಕರವಲ್ಲ.

**ಅಧಿಕಾರಿ.**—ಇನ್ನಷ್ಟು ವ್ಯಸನವೆಂದರೆ—ಆ ಹುಡುಗಿಯೂ ಇಲ್ಲ.

**ಶಹ.**—ಇದೇ ವ್ಯಸನಾಸ್ಪದ! ಆಗಲಿ. ಯುದ್ಧ ಭೂಮಿಯಲ್ಲಿ ಮಲಗಿದ ಸೈನಿಕರೆಷ್ಟು?

**ಅಧಿಕಾರಿ.**—ಸುಮಾರು ಹದಿನೈದು ಸಾವಿರ, ಖಾವಂದರೇ!

**ಶಹ** (ನಿಟ್ಟುಸಿರು ಬಿಟ್ಟು).—ಈ ಶೂನ್ಯ ವಿಜಯಪ್ರಾಪ್ತಿಗೆ ಬೆಲೆ ಬಹಳವಾಯಿತು. ೧೫ ಸಾವಿರ ಯುವತಿಯರು ವಿಧವೆಯರಾದರು!

**ಅಧಿಕಾರಿ.**—ಎಷ್ಟೋ ಮಕ್ಕಳು ಅನಾಥರಾದರು, ಖಾವಂದ!

**ಶಹ.**—ಆಗಲಿ; ಇನ್ನೇನು ಮಾಡೋಣ? ಯಾರು ಯಾರಿಗೆ ತಾಯಿ ತಂದೆಗಳು ಇಲ್ಲದಂತಾಗಿದೆಯೋ ಅವರಿಗೆ ನಾವೇ ಆಶ್ರಯಸ್ಥಾನ ವೆಂದು ಡಂಗುರ ಸಾರುವುದು.

**ಅಧಿಕಾರಿ.**— ಎಷ್ಟೋ ವೀರರು ಸತ್ತರು, ಪ್ರಭು.

**ಶಹ.**— ಬೆಲೆಗೊಟ್ಟರೆ ದೊರೆವ ವೀರರ ಮಾತು ಹಾಗಿರಲಿ. ನಿಜ ವಾಗಿಯೂ ಮುಂದೆ ದೊರೆಯಲಾರದಂಥವರು ಯಾರು ಮಡಿದರು, ರಹೀಂ?

**ಅಧಿಕಾರಿ.**— ಅಜೀಮ್ ಖಾನ್!

**ಶಹ.**— ಅವನೂ ಮಡಿದನೇ ?

**ಅಧಿಕಾರಿ.**— ಈ ವಿಷಯದಲ್ಲಿ ಸಂದೇಹವಿಲ್ಲ.

**ಶಹ.**— ಅಜೀಮನೂ ಸತ್ತ! ಇದನ್ನಿನ್ನೂ ನಂಬಲಾಗುವುದಿಲ್ಲ.

**ಅಧಿಕಾರಿ.**— ಏಕೆ ಪ್ರಭುಗಳೇ ?

**ಶಹ.**— ಪ್ರಫುಲ್ಲ ಯೌವನ, ಉತ್ತರೋತ್ತರಾಭಿವೃದ್ಧಿಯ ಆಸೆ, ಇವೆರಡು ಆತನಲ್ಲಿದ್ದುವು.

**ಅಧಿಕಾರಿ.**— ಅವನಂತಹ ಎಷ್ಟೋ ತರುಣರು ಹುತಾತ್ಮರಾಗಿ ರುವರು.

**ಶಹ.**— ಇರಬಹುದು. ಅವರಿಗೂ ಇವನಂತಹ ತಾರುಣ್ಯವಿದ್ದಿರ ಬಹುದು. ಆದರೆ, ಅದರೊಂದಿಗೆ ಪ್ರಭಾವವಿರಲಿಲ್ಲ.

**ಅಧಿಕಾರಿ.**— ಹೌದು. ಅಜೀಮನನ್ನು ಶತ್ರುಗಳೇ ಕೊಂದುದು.

**ಶಹ.**— ನನ್ನ ಸಂದೇಹಕ್ಕೆ ಕಾರಣವೇನೆಂದರೆ— ಅವನ ಬಾಹ್ಯ ನಟನೆಗಳೊಳಗೆ ಏನೋ ಒಂದು ಆಸೆಯಿದ್ದಿತು, ರಹೀಮ್! ಏನೋ ಒಂದು ಹೃದಯ ಮಧು ಅವನ ಭಾವನೆಗೆ ಸವಿಯನ್ನುಂಟು ಮಾಡು ತ್ತಿದ್ದಿತು. ಅದು ಹೇಗೆ ತಿಳಿಯಿತೆಂದರೆ— ಯುದ್ಧದ ಹೆಸರು ಕೇಳಿದೊಡನೆ ಕುಣಿದಾಡುತ್ತಿದ್ದ ಆತನು ಈ ಸಲ ಜಾಡ್ಯದಿಂದ ಇದ್ದನು. ಯುದ್ಧಕ್ಕೆ ಹೊರ ಡೆಂದರೆ ಆಲಸ್ಯ; ಮನಸ್ಸು ಎತ್ತಲಾರದಷ್ಟು ಭಾರ ಇದರಿಂದ ಊಹಿಸಿ ಕೊಂಡೆ— ಇವನ ಹೃದಯದೊಳಗೆ ಏನೋ ಒಂದು ಮಧುರವಾದ ಆಸೆಯಿದ್ದಿತೆಂದು.

**ಅಧಿಕಾರಿ.**— ಆಗಿರಬಹುದು.

**ಶಹ.**— ಲೀಲಾವತಿಯೂ ಅಂಥವಳೇ. ಕಲ್ಲಿನ ಹೃದಯದಲ್ಲಿಯೂ ಅಭಿಲಾಷೆಯನ್ನು ಒಸರಿಸಬಲ್ಲಳು.

**ಅಧಿಕಾರಿ**— ಹುಂ.

**ಶಹ.**—ರಾಜ್ಯತೃಷ್ಣೆ! ಅದು ಅವನಿಗೆ ಇರಲಿಲ್ಲ. ಉಂಬಳಿಗಳನ್ನು ಎಷ್ಟೋ ಕೊಟ್ಟರೂ ಅದನ್ನು ಒಲ್ಲೆನೆಂದಿದ್ದ.

**ಅಧಿಕಾರಿ.**— ಹುಂ.

**ಶಹ.**—ರಾಜರು ಕೊಡುವ ಉಂಬಳಿಗಿಂತಲೂ ವಿಲಾಸಿನಿಯರು ಕೊಡುವ ಪ್ರೇಮವು ಅನರ್ಘವಾದುದು, ರಹೀಂ!

**ಅಧಿಕಾರಿ.**—ಸರಿ. ಆದರೆ ಅಜೀಮನು ಉಳಿದಿಲ್ಲ. ಇದು ಖಂಡಿತ.

**ಶಹ.**—ಕಾರಣವೇನು?

**ಅಧಿಕಾರಿ.**—ಅಜೀಮನು ಸತ್ತುಬಿದ್ದ ರಾತ್ರಿಯಲ್ಲಿಯೇ ಅವನ ಶವವನ್ನು ಒಯ್ಯುವುದಕ್ಕೆ ಒಂದು ಸ್ತ್ರೀವ್ಯಕ್ತಿ ನಡೆಯಿತು. ಕಾಳರಾತ್ರಿಯಲ್ಲಿ ದೀಪ ಹಿಡಿದು ಪಿಶಾಚಿಯಂತೆ ಹೆಣಗಳನ್ನು ಎಡಹಿ ತಡಹಿ ಆತನ ಶವವಿದ್ದಲ್ಲಿಗೆ ಹೋಯಿತು. ಆತನ ಮುಖವನ್ನು ಕಂಡೊಡನೆ ಸ್ತ್ರೀವ್ಯಕ್ತಿಯು ಕಣ್ಣೀರು ಸುರಿಸಿತು. ಅದು ಹೆಪ್ಪುಗಟ್ಟಿದ್ದ ಆತನ ಮೊಗದ ರಕ್ತವನ್ನು ತೊಳೆಯಿತು.

**ಶಹ.**—ಆಶ್ಚರ್ಯ!

**ಅಧಿಕಾರಿ.**—ಆ ಹೆಂಗಸು ತಡೆಯಲಾರದ ಆವೇಶದಿಂದ ಆತನ ದೇಹದ ಮೇಲೆ ಬಿದ್ದು ಸ್ವೇಚ್ಛೆಯಿಂದ ಹೊರಳಾಡಿ, ಬಳಿಯಲ್ಲೇ ಕೆಲಸವಿಲ್ಲದೆ ಬಿದ್ದಿದ್ದ ಖಡ್ಗಕ್ಕೆ ಕೆಲಸಗೊಟ್ಟಳು.

**ಶಹ.**—ಏನು ಆತ್ಮಹತ್ಯೆ!

**ಅಧಿಕಾರಿ.**—ಹೌದು, ಖಾವಂದರೆ! ಆತನನ್ನು 'ತಮ್ಮ' ಎಂದು ಕೂಗಿದಳು.

**ಶಹ.**—ಯಾರು, ಅಜೀಮನ ಅಕ್ಕ?

**ಅಧಿಕಾರಿ.**—ಹೌದು ಪ್ರಭು; ಅಂತಃಪುರದ ದಾಸಿ ಜೀಬಿಯೇ ಆಕೆ!

**ಶಹ.**—ಆಶ್ಚರ್ಯ!

**ಅಧಿಕಾರಿ.**—ಹೌದು ಖಾವಂದ! ನೆನಪಿಲ್ಲವೇ? ಹಿಂದೊಮ್ಮೆ ಖಾವಂದರು ರಜಪೂತ ಪಾಳೆಯಗಾರನೊಬ್ಬನ ಕೋಟೆಯನ್ನು ಹಿಡಿದಿದ್ದರಂತೆ.

**ಶಹ.**—ಒಂದೇ ಎಂದೇನು?

**ಅಧಿಕಾರಿ.**—ಹಲವುಂದಿ ಸ್ತ್ರೀಯರಿಗೆ ಅಂತಃಪುರ ದೀಕ್ಷೆಯನ್ನು ಕೊಟ್ಟಿದ್ದಿರಂತೆ.

**ಶಹ.**—ಇರಬಹುದು.

**ಅಧಿಕಾರಿ.**—ಅಂತಹ ಹೆಂಗುಸರಲ್ಲಿ ಬೀಬಿ ಅಜೀಮರ ತಾಯಿಯೂ ಒಬ್ಬಳು!

**ಶಹ.**—ಇದೂ ಸತ್ಯ!

**ಅಧಿಕಾರಿ.**—ಆ ಹೆಂಗುಸು ತನ್ನ ಮಕ್ಕಳಿಬ್ಬರನ್ನೂ ಯಾರ ವಶಕ್ಕೊ ಕೊಟ್ಟಳು. ಅಂತಃಪುರಕ್ಕೆ ತನ್ನ ಸತೀತ್ವವನ್ನು ಒಪ್ಪಿಸುವಾಗ ಅವರನ್ನು ದೂರ ಇರಿಸಿದಳು.

**ಶಹ.**—ಎಂತಹ ಕಪಟ ಸ್ವಭಾವ!

**ಅಧಿಕಾರಿ.**—ಹೌದು, ಪ್ರಭು!

**ಶಹ.**—ಹಾಗಾದರೆ ವ್ಯಸನವಿಲ್ಲ.

**ಅಧಿಕಾರಿ.**—ಆದರೆ ಅಜೀಮನಂತಹ ವೀರನು ಇನ್ನೆಲ್ಲಿ ಲಭಿಸ ಬೇಕು?

**ಶಹ.**—ಆದರೂ ಪ್ರಭುವಿಗಿಂತ ಸೇವಕನು ಬಲಿಷ್ಠನಾಗಿರಬಾರದು, ವಿಧವಿರ್ಯಾಯನಾಗಿದ್ದರೆ ಮತ್ತಷ್ಟು ಅಪಾಯ!

[ಅಷ್ಟರಲ್ಲಿ ಅರಮನೆಯ **ಶೋಧಕರ** ಪ್ರವೇಶ].

**ಅಧಿಕಾರಿ.**—ಏನೋ ಬೊಬ್ಬೆ! ಅಲ್ಲ; ಜಯಕಾರ. ಸೈನಿಕರು ವಿಜಯಮತ್ತರಾಗಿದ್ದಾರೆ!

**ಬಂದವರು.**—ಅಲ್ಲ, ಪ್ರಭು! ಫಲವು ಕೈಗೆ ಸಿಕ್ಕಿತು!

**ಶಹ.**—ಏನೆಂದಿರಿ?

**ಬಂದವರು.**—ಆ ಹುಡುಗಿ ಸಿಕ್ಕಿದಳು!

**ಶಹ.**—ಇದೂ ನಿಜವೇ?

**ಬಂದವರು.**—ಸಂದೇಹವೇನು ? (ಚಿತ್ರವನ್ನು ತೋರಿಸಿ) ಇದು ಲೀಲಾವತಿಯ ಚಿತ್ರ. ಇವಳು ಸೆರೆಯಲ್ಲಿದ್ದಾಳೆ.

**ಶಹ.**—ಹಾಗಾದರೆ ಅಲ್ಲನು ಇನ್ನೂ ಬದುಕಿರುವನೆಂದಾಯಿತು. ಒಮ್ಮೆ ಎಲ್ಲರೂ ಜಯಕಾರಮಾಡಿರಿ.

[ಎಲ್ಲರೂ ಅಲ್ಲಾ ಹೋ ಅಕ್ಬರ್ ಎಂದು ಕೂಗುವರು].



# ಏಳನೆಯ ಅಂಕ.

## ದೃಶ್ಯ ೧

[ಒಂದು ಗುಡಿಸಲು; ಪನ್ನೆ, ಲೀಲಾವತಿ— ಇಬ್ಬರೇ ಇದ್ದಾರೆ.
ದೂರದಲ್ಲಿ ಸುತ್ತಲೂ ಕಾವಲುಗಾರರು.]

**ಲೀಲೆ.**— ವೇದಾಂತವು ಎಲ್ಲಿ ಹುಟ್ಟಿತು? ಅಂತರಿಕ್ಷದಲ್ಲೇ? ಪ್ರಪಂಚದ ಮಾಯಾ ಪಟಲವನ್ನು ನೋಡಿ ಗುಡುಗುಡಿಸುವ ಮೋಡದಲ್ಲೇ? ಅಥವಾ ಕೋಟ್ಯಂತರ ಯೋಜನದಾಚೆ? ಅಗಣಿತ ತಾರಾಗಣಗಳಿಂದತ್ತ, ಏನೂ ಇಲ್ಲದ ಅಭಾವ ಪದಾರ್ಥದ ಹುಟ್ಟುನಾಡಿನಲ್ಲಿಯೋ? ಹಾಗೆಯೇ ಆಗಿರಬೇಕು. ಇಲ್ಲವಾದರೆ, ವೇದಾಂತವು ಬೀರುವ ಕಿರಣ ರಾಶಿಯಲ್ಲಿ ಒಂದಾದರೂ ಈ ಮಾನವ ಲೋಕದ ಅಂಧಕಾರವನ್ನೇಕೆ ತೊಲಗಿಸುವುದಿಲ್ಲ? ತೊಲಗಿಸುತ್ತದೆ; ಇಲ್ಲವೆಂದಲ್ಲ. ಆದರೆ ಈ ಸ್ಥಿತಿಯು ಕ್ಷಣಿಕವಾಗಿದೆ. ಗಗನಚುಂಬಿಯಾದ ತರುನೀಡದಲ್ಲಿ ಕುಳಿತು ಕುಹೂ ಕುಹೂರವವನ್ನು ಮಾಡುವ ಕೋಕಿಲ ಧ್ವನಿಯಂತೆ ಅದು ಒಮ್ಮೊಮ್ಮೆ ಕೇಳಿಸುತ್ತದೆ; ಇನ್ನೊಮ್ಮೆ ಇಲ್ಲ. ಪರರ ಕಷ್ಟದಲ್ಲಿ ಪರರಿಗೆ ಸಾಂತ್ವನ ಕೊಡಲು ನಮ್ಮ ನಾಲಗೆಯಿಂದ ವೇದಾಂತದ ಒಸರು ನಿರರ್ಗಳವಾಗಿ ಸುರಿಯುತ್ತದೆ. ನಮಗೇ ಆ ವಿಪತ್ತು ಬಂದಿರುವಾಗ ನಾಲಗೆ ಬತ್ತುವುದು. ಆಹಾ ವೇದಾಂತದ ವಂಚನ ಸ್ವಭಾವವೇ? ಅಥವಾ ನಮ್ಮ ಬುದ್ಧಿ ಅಂತಹದು. ಅದು ವೇದಾಂತ ಫಲದ ಕಡೆಗೆ ಕೈಚಾಚಿ ನೀಳ್ಕರಿಸುವುದಿಲ್ಲ. ಅದರ ಮುಟ್ಟಕ್ಕೇರುವುದಿಲ್ಲ, ದುಃಖಾನುಭವದ ತೀವ್ರವೇದನೆಯಿಂದ ಜಡೀಭೂತವಾದ ಹೃದಯವು ಆ ಕಡೆಗೆ ಹಾರುವುದಿಲ್ಲ. ಏರುವುದಿಲ್ಲ. ಆದುದರಿಂದಲೇ ಮನುಷ್ಯ ಸಂಸಾರವು ದುಗುಡದ ಹುತ್ತವೆಂದು ಹೇಳುತ್ತಾರೆ. ಹಾಗೆಯೇ ಸರಿ. ಆಹಾ ನನ್ನ ಅವಸ್ಥೆಯೆ! ಪ್ರಾಣವನ್ನು ನೀಗಲು ಇಂತಹ ವಿಪತ್ತು ಬರುವ ವರೆಗೆ ಕಾಯಬೇಕಾಗಿತ್ತೇ? ಒಡಹುಟ್ಟಿದವರು, ಬಂಧುಗಳು, ಬಳಗದವರು ಕಾಲಪ್ರವಾಹದಲ್ಲಿ ತೇಲಿ ಹೋಗುವಾಗ, 'ಪ್ರತೀಕಾರ' ವನ್ನು ಆಲಂಬಿಸಿ ಪ್ರಾಣಧಾರಣವನ್ನು ಮಾಡಿದೆ. ಪ್ರತೀಕಾರ ಭಾವನೆಯ ರೆಂಬೆಯಲ್ಲಿ ನನ್ನ

ಆಸೆಗಳೆಲ್ಲಾ ಗೂಡುಕಟ್ಟಿ ನೇತಾಡುತ್ತಿದ್ದುವು. ಆದರೆ ಈಗ ಅದರ ತಾಯಿ ಬೇರೇ ಕಡಿಯಲ್ಪಟ್ಟಿದೆ. ಇನ್ನೆಲ್ಲಿಯ ಪ್ರತೀಕಾರ? ಅಯ್ಯೋ, ನಮ್ಮ ಮೂಢತೆಯೇ! ನಮ್ಮ ಅಹಂಕಾರದ ಮೇಲೆ, ಈ ಮರಳ ರಾಶಿಯ ಮೇಲೆ ಕಲ್ಪನೆಯನ್ನು ಕಟ್ಟುವೆವು. ಅಡಿಗಟ್ಟು ಕುಸಿದು ಬೀಳುವಾಗ, ನಮ್ಮ ಮಿಥ್ಯಾ ಕಲ್ಪನೆಗಳ ಕಲ್ಲುರಾಶಿಯೊಳಗೆ ಅಹಂಕಾರವೂ, ಮನಸ್ಸೂ, ಬುದ್ಧಿಯೂ ಆತ್ಮವೂ ರೋದಿಸಿ ಸಮಾಧಿ ಹೊಂದುವುವು. ಈ ರೋದನ ಧ್ವನಿಯೇ ಬರುವ ಜನ್ಮದ ಆಶಾಧ್ವನಿಯಾಗುವುದು ಇದೇ ಈ ಕರ್ಮಭೂಮಿಯ ಮಹತ್ವ. ಅಂದು ನನ್ನವರೆಲ್ಲಾ ಅಗ್ನಿಯ ಮರೆಹೊಕ್ಕಾಗ ಹಿಂದೆ ನಿಂತೆ. ಸ್ತ್ರೀಯರು ಅಬಲೆಯರು ಎಂಬ ಮಾತನ್ನು ಕೇಳಿ, ಮನುಷ್ಯನ ನೆಳಲು ಸೋಂಕಿದ ಸರ್ಪನಂತೆ ನನ್ನ ಅಹಂಕಾರವು ಬುಸುಗುಟ್ಟುತಿತ್ತು. ಸ್ತ್ರೀವ್ಯಕ್ತಿಯೆಂದರೆ ಸಾಕ್ಷಾತ್ ಆದಿಶಕ್ತಿಯೆಂಬುದನ್ನು ಸಿದ್ಧಾಂತ ಪಡಿಸಿ ತೋರಿಸೋಣ ಎಂದು, ಈ ಜಡದೇಹವನ್ನು ಅಗ್ನಿ ಜ್ವಾಲೆಗೆ ಒಪ್ಪಿಸಲಿಲ್ಲ. ವಿಕ್ರಮಸಿಂಹನನ್ನು ಹೇಡಿಯೆಂದು ಮೃತ್ಯುವದನಕ್ಕೆ ದೂಡಿದೆ. ಮನುಷ್ಯ ಪೌರುಷವನ್ನು ಹಂಗಿಸಿ ಭಂಗಿಸಿ ನುಡಿದೆ. ಬದುಕುವವರು ಹೇಡಿಗಳು, ಬದುಕು ಎಂಬ ಮಾತನ್ನು ಕೇಳಿದೊಡನೆ ದ್ವೇಷವು ಕುದಿಯುತ್ತದೆ ಎಂದು ಮೊದಲಾಗಿ ಮೊಳಗಿನ ಮಾತನ್ನಾಡಿದೆ. ಆ ಬದುಕಿಗೆ ಅಂಟಿಕೊಂಡೆ. ಗಿಡುಗನು ಹಾರಿ ಬರುವಾಗ, ತಾಯಿ ತುಪ್ಪುಳೊಳಗೆ ಅಡಗಿಕೊಳ್ಳುವ ಮರಿ ಹಕ್ಕಿಯಂತೆ ಅದೇ ಬದುಕಿನೊಳಗೆ ಅಡಗಿ ಕುಳಿತೆ. ಎಂತಹ ಹೇಯ ಬುದ್ಧಿ! ಸಾಯುವ ಜನರಿಗೆ ದಿನ ನೋಡಬೇಕೇ? ಪ್ರತೀಕಾರಕ್ಕೆ ಇಷ್ಟೆಲ್ಲಾ ಮಿಥ್ಯಾಚಾರ ಬೇಕೇ? ನನ್ನ ಪ್ರಾಣ ಪ್ರಿಯ ಸಹೋದರ ಸಹೋದರಿಯರು ಸಂಸಾರಬಂಧ ವಿಮೋಚನೆಯಿಂದಾದ ಸ್ವಚ್ಛಂದ ವೃತ್ತಿಯಿಂದ ಎಲ್ಲೆಲ್ಲಿಯೋ ಹರಿದೋಡುತ್ತಿರುವಾಗ ನಾನಿಲ್ಲಿ ಸೆರೆಯಾಳು. ಸೆರೆಯೆಂದರೆ ಎಂತಹ ಭಯಂಕರ ಬಂಧನ! ಆತ್ಮವು ಅಹಂಕಾರದ ಸೆರೆಯಲ್ಲಿದೆ. ಅಹಂಕಾರವು ದೈವ ಶಕ್ತಿಯಿಂದ ಬಂಧಿಸಲ್ಪಟ್ಟಿದೆ. ದೇಹದೊಳಗೆ ಜೀವನು ಸೆರೆ ನಿಂತಿರುವನು. ದೇಹವನ್ನು ಶತ್ರುವಿನ ಆಳುಗಳು ಸೆರೆ ಹಿಡಿದಿರುವರು. ಅಹಂಕಾರವುಳ್ಳವರು ಹೀಗೆ ಸಾಯುವುದೇ? ಹೀಗೆ ಅಳುವುದೇ? ಛೇ! ಎಂದೂ ಅಲ್ಲ. ಇನ್ನಾದರೂ ಹೇಗಾದರೂ ಸಾಯಬೇಕು. ಹೇಗಾದರೂ ಎಂದರೆ ಹೇಗೆ? ಅಯ್ಯೋ! ಇದನ್ನೂ ಕಲಿಯುವ ಪ್ರಸಂಗ ಬಂತು. ಸಾವನ್ನು ಬೋಧಿಸುತ್ತಿದ್ದ

ವಳು ಈಗ ಅದನ್ನು ಅಧ್ಯಯನ ಮಾಡಬೇಕಾಗಿ ಬಂತು. ಆತ್ಮಹತ್ಯೆಯೇ? ಅದಕ್ಕೂ ಒಂದು ನಿರ್ಬಂಧ; ಶಾಸ್ತ್ರನಿರ್ಬಂಧ. ಆತ್ಮಹತ್ಯೆಯು ಮಹಾ ಪಾಪವಂತೆ. 'ಪಾಪ' ಎಂಬ ಪ್ರಮೇಯವು ಇರಬಹುದು; ಇಲ್ಲದಿರ ಬಹುದು. ಆದರೆ 'ಪಾಪ' ಎಂಬ ಯಾವುದೋ ಒಂದಕ್ಕೆ ಹೆದರ ಬೇಕೆಂದು ನಮ್ಮ ತತ್ವವು ಕಲಿಸಿದೆ. ಮನಸ್ಸಿಗೆ ಹೆದರಿ ಅಭ್ಯಾಸವಾಗಿದೆ. ಹುಲಿಯ ಗರ್ಜನೆಯನ್ನು ಕೇಳಿದ ಮಾತ್ರಕ್ಕೆ ಬಡ ಪಶುವು ಓಡಿಹೋಗುವು ದಲ್ಲವೇ? ಕೆಂಪು ಮಣ್ಣಿರುವಲ್ಲಿ ಕರ್ಪು ಎಂದು ಭ್ರಮಿಸಿ ಗಜರಾಜನಾದರೂ ದಿಕ್ಕುಗೆಟ್ಟು ಧಾವಿಸುವನಲ್ಲವೇ? ಅದರಂತೆ 'ಪಾಪ' ಎಂದು ಕೇಳಿದೊ ಡನೆ ಮೈ ಜುಮ್ಮೆನ್ನುತ್ತಿದೆಯಲ್ಲಾ? ಇದೂ ಒಂದು ಬಂಧನ. ಆತ್ಮಸ್ವಾ ತಂತ್ರ್ಯವಿಘಾತ! ಏನು ಮಾಡಲಿ? ಅದೇ ಈಗಿನ ಪ್ರಶ್ನೆ ಯಾರೋ ಒಬ್ಬನ ಶಾಸನ ನಿಗಳದಿಂದ ಕಟ್ಟಲ್ಪಟ್ಟ ಈ ಪ್ರಪಂಚಕ್ಕೆ ಕಾಲಿಟ್ಟಿದ್ದೇನೆ. ಅದನ್ನು ಹೇಗೆ ಮೀರಿ ಹೋಗಲಿ? ಪ್ರತಿಯೊಂದು ವಸ್ತುವಿನಲ್ಲಿ ಪ್ರತಿ ಯೊಂದು ಭಾವನೆಯಲ್ಲಿ ಏನು ಮಾಡುವುದು? ಎಂದೇ ಪ್ರತಿ ಧ್ವನಿಸು ತ್ತಿದೆಯಲ್ಲಾ! ಜೀವನದ ಆದಿಯಲ್ಲಿಯೂ ಇದೇ ಪ್ರಶ್ನೆ. ಅಂತ್ಯ ದಲ್ಲಿಯೂ ಇದೇ? ಪನ್ನೆ! ಪನ್ನೆ! ಎಲ್ಲಿ ಪನ್ನೆ? (ಪನ್ನೆ ಬರುವಳು).

**ಪನ್ನೆ** (ಕಣ್ಣೀರು ಸುರಿಸುತ್ತ).—ಅಯ್ಯೋ ಮಗಳೆ! ನಾನಿನ್ನೂ ಯಾಕೆ ಸಾಯಲಿಲ್ಲ? ಸಾಯಬೇಕೆಂದು ಧ್ಯಾನ ಮಾಡುತ್ತಾ ಇಲ್ಲಿಯೇ ಮೂಲೆ ಯಲ್ಲಿ ಕುಳಿತಿದ್ದೆ. ನೀನು ಕರೆಯುವಾಗ ಹೋಯಿತದು. ಅವರು ಹೋಗುವಾಗ ಹೇಳಿದ್ದರು; ಹಿಂದೆಯೂ ಎಷ್ಟೋ ಸಲ ಹೇಳಿದ್ದರು "ಪನ್ನೆ! ನಿನ್ನ ವಶ" ಎಂದು! ಹಣ್ಣು ಮುದುಕಿಯ ಕೈಯಲ್ಲಿ ಇಂಥ ಅರಗಿಣಿಯನ್ನು ಕೊಡಬಹುದೇ? ಮುರಿದು ಬೀಳುವ ಗುಡಿಸಲಿನೊಳಗೆ ಚಿನ್ನದ ಕೊಪ್ಪ ರಿಗೆಯನ್ನಿಡುವುದೇ? ಆದರೂ ಅವರಿಗೆ ನನ್ನಲ್ಲಿ ಅಷ್ಟು ಪ್ರೀತಿ. ತಮ್ಮ ಬೊಂಬೆಯನ್ನು ನನ್ನ ಕೈಗೊಪ್ಪಿಸಿದರು. ಮಗಳೇ ನಾನು ಸಾಯುತ್ತೇನೆ.

**ಲೀಲೆ.**—ವ್ಯಸನಪಡ ಬೇಡ ಪನ್ನೆ!

**ಪನ್ನೆ.**—ಇಲ್ಲಮ್ಮ ವ್ಯಸನ! ನಾನು ಸಾಯುತ್ತೇನೆ. ವ್ಯಸನವಿಲ್ಲದೆ ಸಾಯುತ್ತೇನೆ. ನಿನ್ನನ್ನು ಮತ್ತೆ ಸಲಹುವವರಾರು ಮಗಳೆ? ಖಂಡಿತ ವಾಗಿ ಸಾಯುತ್ತೇನೆ. ಅಡ್ಡಿಯುಂಟೇ ತಾಯಿ?

**ಲೀಲೆ.**—ಯಾರು ಯಾರಿಗೆ ಅಡ್ಡಿ ಮಾಡುತ್ತಾರೆ, ಪನ್ನೆ? ಈಗ ಇರುವ ಆತಂಕವೇ ಹೆಚ್ಚಾಯಿತು.

**ಪನ್ನೆ.**—ಹಾಗಾದರೆ ವ್ಯಸನವಿಲ್ಲ. ಯಾರಿಗೂ ವ್ಯಸನವಾಗದಂತೆ ಸಾಯುತ್ತೇನೆ. ಹೀಗೆ ಮಾಡುತ್ತೇನೆ ತಾಯಿ, ಆಗಬಹುದೋ? ಆ ಹೊತ್ತಿನ ನೆನಪು ಈಗಲೂ ಬರುತ್ತಿದೆ. ಆಗ ನಾನು ಅರಮನೆಗೆ ಬಂದಿದ್ದೆ. ಮಹಾರಾಣಿ, ನಿಮ್ಮ ತಾಯಿ ಹೊಸ ಮದುಮಗಳಾಗಿ ಬಂದುದು. ನನ್ನ ಕೆಲಸ ನೋಡಿದಳು. ಸಂತೋಷದಿಂದ ಕೈ ಬೆರಳಲ್ಲಿದ್ದ ಉಂಗುರವನ್ನು ಕೊಟ್ಟಳು. ಇಗೋ ನೋಡು ಮಗಳೇ! (ಎಂದು ತೋರಿಸುವಳು.) ಇದು ಬೆಲೆಬಾಳುವ ಉಂಗುರ. ಕಷ್ಟಕಾಲದಲ್ಲಿ ಇದರಿಂದ ಪ್ರಯೋಜನವಾಗಬಹುದು. ಎಂದಿದ್ದಳು. ಇದರಲ್ಲಿರುವ ವಜ್ರವನ್ನು ನುಂಗಿ ಯಾರಿಗೂ ವ್ಯಸನ ಮಾಡದೆ ನಾನೂ ವ್ಯಸನ ಹೊಂದದೆ (ಕಣ್ಣೀರು ಸುರಿಸುತ್ತಾ) ಸಾ-ಯು-ವೆ-ನು ತಡೆ! ಒಂದು ಕಥೆ ನೆನಪಾಯಿತು.

**ಲೀಲೆ.**—ನಮ್ಮ ಕಥೆಯೇ ಸಾಕಲ್ಲ, ಪನ್ನೆ!

**ಪನ್ನೆ.**—ಅಜ್ಜಿ ಕಥೆಯೆಂದು ಭಾವಿಸಿದೆಯೊ? ಕಾಗೆ ಗುಬ್ಬಿಗಳ ಕಥೆಯೆಂದು ಗ್ರಹಿಸಿದೆಯಾ ತಾಯಿ! ಅಲ್ಲಮ್ಮ. ಅದು ನಡೆದ ಸಂಗತಿ. ಹೇಳಿಬಿಡುತ್ತೇನೆ. ಸತ್ತ ಮೇಲೆ ಯಾರಿಗೆ ಹೇಳುವುದು ಇದನ್ನು? (ಆಕೆಯ ಮುಖವನ್ನು ನೋಡಿ) ಸರಿ: ಹೇಳುತ್ತೇನೆ. ನಾನು ಚಿಕ್ಕವಳಾಗಿದ್ದೆ; ಈಗಿನ ಹಾಗಲ್ಲ; ಒಳ್ಳೇ ರೂಪವಿತ್ತು ಅದು ಈ ಕಥೆಗೆ ಬೇಡ. ನನಗೆ ನಿನ್ನಷ್ಟು ವಯಸ್ಸು ಆಗ. ನಮ್ಮ ಮನೆ ಬಳಿಯಲ್ಲಿ ಇನ್ನೊಂದು ಮನೆ. ಅದರಲ್ಲಿ ಒಬ್ಬ ಗಂಡ, ಒಬ್ಬಳು ಹೆಂಡತಿ. ಗಂಡ ಬರೆ ಮೂರ್ಖ. ಹೆಂಡತಿಯನ್ನು ದಿನಂಪ್ರತಿ ಹೊಡೆಯುವುದು. ಪೆಟ್ಟೆಂದರೆ ಎಂತಹ ಪೆಟ್ಟು ತಾಯಿ? ಅಗಸನು ವಸ್ತ್ರದಿಂದ ಕಲ್ಲನ್ನು ಹೊಡೆವಂತಹ ಪೆಟ್ಟು.

**ಲೀಲೆ.**—ಪನ್ನೆ! ನೋಡು ಹೊರಗೆ ಯಾರಿದ್ದಾರೆಂದು.

**ಪನ್ನೆ.**—ಯಾರೂ ಇಲ್ಲ, ತಾಯಿ. ಹೇಳಿ ಬಿಡುತ್ತೇನೆ, ಮತ್ತೆ ಸಾಯುತ್ತೇನೆ. ದಿನಂಪ್ರತಿ ಹೊಡೆಯುವುದು.

**ಲೀಲೆ.**—ಕಥೆ ಹೇಳಿ ಸಾಯುವ ಜಂತು!

**ಪನ್ನೆ.**—ಆಗಲೇ ಹೇಳಿದೆನಲ್ಲ! ದಿನಾಲೂ ಹೊಡೆಯುವುದು. ಸರಿ; ಹೆಂಡತಿ ಬದುಕುವುದೇ ಕಷ್ಟವಾಯಿತು. ಜೀವ ಹಿಡಿದಿರುವುದು ಸಾಧ್ಯವಿಲ್ಲ ವಾಯಿತು. ಎಲ್ಲ ಹೆಂಗುಸರ ಅವಸ್ಥೆಯೂ ಹೀಗವ್ಮ (ಇಲ್ಲಿ ಧ್ವನಿ ಸ್ವಲ್ಪ ನಡುಗುವುದು). ಸರಿ; ಒಂದು ದಿನ ಪೆಟ್ಟಿಗೆಯೊಳಗಿದ್ದ ಒಂದೇ ಒಂದು ಉಂಗುರ, ಇದನ್ನು ತಂದೆ ಬಳಿವಳಿಯಾಗಿ ಕೊಟ್ಟಿದ್ದ, ಇದನ್ನು ನುಂಗಿ ಪ್ರಾಣ ಬಿಟ್ಟಳು, ತಾಯಿ! ಸಣ್ಣ ಪ್ರಾಯದಲ್ಲಿ ಹೆಮ್ಮಕ್ಕಳನ್ನು ಮದುವೆ ಮಾಡಿಕೊಡುವಾಗ, ತಾಯಿತಂದೆಗಳು ಸಡಗರದಿಂದ ಉಡುವುದಕ್ಕೆಂದು ತೊಡುವುದಕ್ಕೆಂದು ಉಡಿಗೆತೊಡಿಗೆಗಳನ್ನು ಕೊಡುತ್ತಾರೆ. ದೈವವು ಒಲಿದರೆ, ಉಡುತ್ತಾರೆ ತೊಡುತ್ತಾರೆ, ಗಂಡಂದಿರೊಡನೆ ಸುಖವಾಗಿ ಜೀವಿಸುತ್ತಾರೆ. ದೈವವು ಮುಳಿದರೆ, ಗಂಡಂದಿರು ಕ್ರೂರರಾಗಿದ್ದರೆ, ಸಾಯುವುದು ಹೇಗೆಂಬುದನ್ನು ಆ ಉಡಿಗೆತೊಡಿಗೆಗಳೇ ಕಲಿಸಿ ಕೊಡುವುವು. ಹೆಣ್ಣು ಬಾಳಿನ ಹಾಡು ಹೀಗೆ, ತಾಯಿ! (ಅಳುವಳು).

**ಲೀಲಾವತಿ.**—ಪನ್ನೆ! ಯಾವ ಚಿಂತೆಯನ್ನು ಕಟ್ಟಿಕೊಳ್ಳ ಬೇಡ. ಬೇಡದುದನ್ನು ಆಡಿಸಿ ಆತ್ಮವನ್ನು ಕುಗ್ಗಿಸ ಬೇಡ. ಅವರು ಧೈರ್ಯದಿಂದ ಸತ್ತರು. ನಾವೂ ಹಾಗೆಯೇ ಮಾಡೋಣ!

**ಪನ್ನೆ.**—ಆಯಿತು, ತಾಯಿ! ಇನ್ನು ಕಥೆ ಹೇಳುವುದಿಲ್ಲ. ಇದೇ ನನ್ನ ಜೀವನದ ಕೊನೆಯ ಕಥೆ. ಇನ್ನು ಯಾರು ಹೇಳುತ್ತಾರೆ? ಯಾರು ಕೇಳುತ್ತಾರೆ? ಕಥೆ ಹೇಳಿ ಪ್ರಾಣಬಿಟ್ಟ ಹಾಗಾಯಿತು.

**ಲೀಲಾವತಿ.**—ಈಗಲೇ ಶಹನ ಆಳುಗಳು ಬರಬಹುದು.

**ಪನ್ನೆ.**—ಹೌದು; ಧೈರ್ಯದಿಂದ ಸಾಯುತ್ತೇನೆ. ಕಥೆ ಹೇಳುವುದಿಲ್ಲ.

**ಲೀಲಾವತಿ.**—ಅವರಲ್ಲಿ ಒಂದು ಕಪಟವನ್ನು ಹೂಡಬೇಕು.

**ಪನ್ನೆ.**—ಕಪಟವೆಂದರೆ ಕಥೆಯೇ?

**ಲೀಲಾವತಿ** (ನಗುತ್ತ).—ಅಲ್ಲ; ಪನ್ನೆ. ನಾನು ಈಗ ಹೇಳುವಂತೆ ಅವರಲ್ಲಿ ಹೇಳಬೇಕು. ಅದಕ್ಕೆ ಕಪಟ ಎಂದು ಹೆಸರು.

**ಪನ್ನೆ.**—ಆಯಿತು ತಾಯಿ. ಸಾಯುವ ಮೊದಲೇ ಕಪಟವನ್ನು ಮುಗಿಸಿ ಬಿಡುತ್ತೇನೆ.

**ಲೀಲಾವತಿ.**—ಅವರು ಪಾಲಕಿಯೊಡನೆ ಬಂದಾರು.

**ಪನ್ನೆ.**—ಪಾಲಕಿ! ಸಾಯುವವರಿಗೆ ಪಾಲಕಿ!

**ಲೀಲಾವತಿ.**—ಅವರಲ್ಲಿ ಹೇಳು ಲೀಲಾವತಿ ಶಹನ ಡೇರೆಗೆ ತಾನಾಗಿ ಬರುವಳೆಂದು.

**ಪನ್ನೆ.**—ಅಯ್ಯೊ, ದೇವರೆ!

**ಲೀಲಾವತಿ.**—ಬೆಚ್ಚ ಬೇಡ ಪನ್ನೆ! ಇದು ಸತ್ಯವಲ್ಲ. ಅವರನ್ನು ಮೋಸ ಮಾಡಲು ಹೇಳುವ ಮಾತು!

**ಪನ್ನೆ.**—ಹಾಗೆಯೋ ಅವರಲ್ಲಿ ಹೇಳಿಬಿಡಲೇ ?

**ಲೀಲಾವತಿ.**—ಛೆ! ಅದನ್ನು ಹೇಳ ಬಾರದು. ನಿನ್ನಲ್ಲಿ ಮಾತ್ರ ವಿಶ್ವಾಸವಿಟ್ಟು ಈ ಮಾತನ್ನು ಹೇಳಿದುದು.

**ಪನ್ನೆ.**—ಹಾಗಾದರೆ ಅವರಲ್ಲಿ ಏನು ಹೇಳ ಬೇಕು ?

**ಲೀಲಾವತಿ.**—ಮೊದಲು ಹೇಳಿದಂತೆ ಲೀಲಾವತಿ ತಾನಾಗಿ ಬರುವಳೆಂದು. ಗೊತ್ತಿರಲಿ ಇದು ಸುಳ್ಳು; ಹೀಗೆಂದೂ ಆಗುವದಿಲ್ಲ.

**ಪನ್ನೆ.**—ಸಾಯುವಾಗ ಸುಳ್ಳು ಹೇಳಬೇಕೇ ?

**ಲೀಲಾವತಿ.**—ಹೇಳ ಬೇಕು.

**ಪನ್ನೆ.**—ಮೊದಲು ನೀನು ಹೇಳಿದುದು ಕಪಟವೆಂದು. ಈಗ ಸುಳ್ಳು ಹೇಳಬೇಕೆನ್ನುವೆಯಲ್ಲ.

**ಲೀಲಾವತಿ.**—ಇದೇ ಸುಳ್ಳು. ಇದೇ ಕಪಟ.

**ಪನ್ನೆ.**—ಎರಡನ್ನೂ ಒಟ್ಟಿಗೆ ಹೇಳಬೇಕು.

**ಲೀಲಾವತಿ.**—ಹಾಗಲ್ಲ, ಪನ್ನೆ! ಯಾವುದನ್ನು ಶಹನ ಆಳುಗಳಲ್ಲಿ ಹೇಳಬೇಕೆಂದಿರುವೆನೋ ಅದನ್ನು ಹೇಳು. ಇಷ್ಟೇ ಮಾಡಿದರೆ ಸಾಕು.

**ಪನ್ನೆ.**—ನನಗೊಂದೂ ಅರ್ಥವಾಗುವುದಿಲ್ಲ. ದಮ್ಮಯ್ಯ ತಾಯಿ. ಇಷ್ಟು ಕಾಲ ಸಾಕಿ, ಸಲಹಿ, ಮುದ್ದಾಡಿ ಒಂದು ದಿನವೂ ಅಗಲದೆ ಹೀಗೆ ಹೇಳಬೇಕೆ ?

**ಲೀಲಾವತಿ.**—ಹೇಳುವುದು ಮಾತ್ರ ಹೀಗೆ; ಮಾಡುವ ಕೆಲಸವೇ ಬೇರೆ.

**ಪನ್ನೆ.**—ಹೀಗೆ ಹೇಳುವುದೂ ಬೇಡ; ಮಾಡುವುದೂ ಬೇಡ.

**ಲೀಲಾವತಿ.**—ಹುಚ್ಚು ಹೆಂಗುಸೆ! ಮಾನವುಳಿಯಬೇಕಾದರೆ ಹೀಗೆ ಆಚರಿಸಲೇ ಬೇಕು.

**ಪನ್ನೆ.**—ಹುಂ; ದೇವರೆ!

**ಲೀಲಾವತಿ.**—ಆ ದಿನ ವಿಷದ್ರಾವಕವನ್ನು ಸವರಿದ ವಸ್ತ್ರಾಭರಣಗಳನ್ನು ಕಳುಹಿಸುತ್ತೇನೆ.

**ಪನ್ನೆ** (ಆಶ್ಚರ್ಯದಿಂದ).—ಎಂತಹ ಕಪಟ ತಾಯಿ ನಿನ್ನದು? ಸರಿ; ಹಾಗೆಯೇ ಹೇಳುತ್ತೇನೆ.

**ಲೀಲಾವತಿ.**—ವಸ್ತ್ರಗಳಲ್ಲಿ ವಿಷವಿದೆಯೆಂದು ಹೇಳಬಾರದು.

**ಪನ್ನೆ.**—ಹೇಳ ಬಾರದೆಂದರೆ ಹೇಳುವುದಿಲ್ಲ.

**ಲೀಲಾವತಿ.**—ಹೇಳಬಾರದುದನ್ನು ಹೇಳಿದರೆ ನಮ್ಮ ಕಪಟವೆಲ್ಲಾ ಹೊರಬೀಳುವುದು.

**ಪನ್ನೆ.**—ಆಯಿತು. ಹಾಗೆಯೇ ಮಾಡುತ್ತೇನೆ. (ಹೊರಗೆ ಸದ್ದಾಗುವುದು).

**ಲೀಲಾವತಿ.**—ಯಾರೋ ಬರುತ್ತಾರೆ.

**ಪನ್ನೆ.**—ಹಾಗೆಯೇ ಹೇಳುತ್ತೇನೆ.

**ಲೀಲಾವತಿ.**—ಬೇಗನೆ ನಡೆ!

**ಪನ್ನೆ.**—ಆಯಿತಮ್ಮ! ಸಾಯುವಾಗ ಕಪಟಹೇಳಿ ಸಾಯುತ್ತೇನೆ. ನಿನ್ನ ಮಾನವುಳಿಯಲಿ ತಾಯಿ! ಹೆಂಗುಸರಿಗೆ ಮಾನಕ್ಕಿಂತ ಹೆಚ್ಚಿನವೇನು?

**ಲೀಲಾವತಿ.**—ಕಷ್ಟಗಳೂ ಸುಖಗಳೂ ಮಿತವಾಗಿ ಪರ್ಯಾಯ ಕ್ರಮದಿಂದ ಬಂದರೆ, ಎರಡರಲ್ಲಿಯೂ ಸ್ವಾರಸ್ಯವಿರುತ್ತದೆ. ಆದರೆ ದುಗುಡವೊಂದೆ ಹದಮೀರಿ ಬಂದಿತೆಂದರೆ, ಹೃದಯವು ಬಂಡೆಯಂತೆ ಕರ್ಕಶವಾಗಿ ದುಃಖತರಂಗಗಳು ಏರುತ್ತಲೂ ಇಳಿಯುತ್ತಲೂ ಇರುವಾಗ, ಅವುಗಳ ಮುಂದೆ ಅನುದ್ವಿಗ್ನವಾಗಿ ನಿಲ್ಲುತ್ತದೆ.

## ದೃಶ್ಯ ೨

[ಅಹಮ್ಮದ್ ಶಹನ ಶಿಬಿರದ ಹೊರಗೆ ಇಬ್ಬರು ಕಾವಲುಗಾರರು.
ಸಮಯ ಮುಂಜಾವ]

**ಒಂದನೆಯವ.** — ಅನಾಹುತವೇನಯ್ಯ ಕಳೆದ ರಾತ್ರಿ ?

**ಎರಡನೆಯವ.** — ವಿಶೇಷವೇನು?

**ಒಂದನೆಯವ.** — ತಲೆಗೆ ಬೆಂಕಿ ಬಿದ್ದರೂ ತಿಳಿಯದ ಮೂಢ ಪ್ರಾಣಿ!

**ಎರಡನೆಯವ.** — ಅಂತಹ ವಿಶೇಷದ ಪ್ರಾಣಿ!

**ಒಂದನೆಯವ.** — ನೀನು!

**ಎರಡನೆಯವ.** — ಇದು ವಿಶೇಷವೇ ಸರಿ.

**ಒಂದನೆಯವ.** — ಸೃಷ್ಟಿ ಮಾಡಿದ ದೇವರು ನಿನಗೆ ಒಂದೇ ಮಾತನ್ನು ಕಲಿಸಿದನಲ್ಲವೆ?

**ಎರಡನೆಯವ.** — ಅದು ವಿಶೇಷವಲ್ಲವೆ?

**ಒಂದನೆಯವ.** — ಹೌದು; ಅದೇ ವಿಶೇಷ; ವಿಶೇಷವೆಂಬ ಒಂದೇ ಮಾತು; ಅದನ್ನೇ ಯಾವಾಗಲೂ ಜಗಿಯುತ್ತೀ.

**ಎರಡನೆಯವ.** — ನಾನು ಇಷ್ಟು ವಿಶೇಷಗಳನ್ನು ಹೇಳಿದಾಗ ನೀನು ಒಂದನ್ನೂ ಹೇಳಲಿಲ್ಲ.

**ಒಂದನೆಯವ** (ನಗುತ್ತಾ). — ನಿನ್ನ ತಲೆ ಏನೋ ವಿಶೇಷದ ಕಡೆಗೆ ತಿರುಗಿರುತ್ತದೆ, ಇರಲಿ; ನಿನ್ನೆ ರಾತ್ರಿ ಸುಲ್ತಾನನು ಸುಖವಾಗಿ ನಿದ್ರಿಸುತ್ತಿದ್ದ.

**ಎರಡನೆಯವ.** — ರಾತ್ರಿ ಎಲ್ಲರಿಗೂ ನಿದ್ರೆ ಬರುತ್ತದೆ.

**ಒಂದನೆಯವ.** — ನಿದ್ರೆ ಬಂದರೆ ವಿಶೇಷವಲ್ಲ; ಆದರೆ—

**ಎರಡನೆಯವ.** — ಹೌದು; ಆದರೆ ಎಂಬುದರಲ್ಲಿ ವಿಶೇಷವಿದೆ.

**ಒಂದನೆಯವ.** — ಮುದಿ ಕತ್ತೆ! ನಿನ್ನನ್ನು ಕಟುಕನ ಕೈಗೆ ಕೊಡಬೇಕು.

**ಎರಡನೆಯುವ.**—ಕತ್ತೆಯ ಮಾಂಸವೂ ಮೆಚ್ಚುತ್ತದೆ ಕೆಲವರಿಗೆ; ವಿಶೇಷ!

**ಒಂದನೆಯುವ.**—ಜಾವದ ಕೋಳಿ ಕೂ ಎಂದು ಕೂಗಿತು.

**ಎರಡನೆಯುವ.**—ದೊಡ್ಡ ಸಮಾಚಾರ!

**ಒಂದನೆಯುವ.**—ಹಾಳು ಕೋತಿ! ನಿನ್ನ ಚಪಲತೆಯು?

**ಎರಡನೆಯುವ.**—ಕಪಿಗೆ ಚಪಲತೆ ಸಹಜ; ಇತರರಿಗೆ ವಿಶೇಷ.

**ಒಂದನೆಯುವ.**—ಶಹನು ಫಕ್ಕನೆ ಹಾಸಿಗೆಯಿಂದೆದ್ದ.

**ಎರಡನೆಯುವ.**—ಡಂಗುರ ಹೊಡೆಯಿರಿ. ಹಾಸಿಗೆಯಿಂದೆದ್ದುದು ಆಶ್ಚರ್ಯ.

**ಒಂದನೆಯುವ.**—ಬೆಂಕಿ! ಬೆಂಕಿ!! ಎಂದು ಅರಚಿದ. ಕಾಪಾಡಿರಿ! ಕಾಪಾಡಿರಿ!! ಎಂದು ಕೂಗಿದ.

**ಎರಡನೆಯುವ.**—ಸುಖನಿದ್ರೆ ಬಾರದವರ ತಲೆಯಲ್ಲಿ ಯಾವಾಗಲೂ ಬೆಂಕಿ.

**ಒಂದನೆಯುವ.**—ನಾನು ಸಮೀಪಕ್ಕೆ ಹೋದೆ. ಏನೂ ಕಾಣಲಿಲ್ಲ!

**ಎರಡನೆಯುವ.**—ಬೇರೆಯವರ ತಲೆಗೆ ಬೆಂಕಿ ಬಿದ್ದರೂ ಗೊತ್ತಾಗದ ಜನರಿದ್ದಾರೆ ಲೋಕದಲ್ಲಿ!

**ಒಂದನೆಯುವ.**—ಬೆಂಕಿಯಿಲ್ಲ ಖಾವಂದರೆ, ಸುಖವಾಗಿದ್ದೀರಿ ಎಂದೆ. ಅವನು ಮತ್ತೂ ಮತ್ತೂ ಬೆಂಕಿ ಬೆಂಕಿ ಎಂದು ಕೂಗಿದ. ಬಳಿಯಲ್ಲಿಯೇ ಪನ್ನೀರಿನ ಕೊಳವಿಯಿತ್ತು. ಮುಖಕ್ಕೆ ಪನ್ನೀರು ಚಿಮಿಕಿಸಿದೆ.

**ಎರಡನೆಯುವ.**—ಬೆಂಕಿ ಆರಿತಲ್ಲಾ?

**ಒಂದನೆಯುವ.**—ಆರುವುದಕ್ಕೆ ಬೆಂಕಿ ಇರಲೇ ಇಲ್ಲ. ಬುದ್ಧಿ ಸ್ವಲ್ಪ ತಿಳಿಯಿತು. ಆಮೇಲೆಯೂ ಹುಚ್ಚು ಮಾತಾಡಿದ.

**ಎರಡನೆಯುವ.**—ತಿಳಿದವರ ತಲೆಯಲ್ಲಿ ಯಾವಾಗಲೂ ಹುಚ್ಚೆಂಬುದು ವಿಶೇಷವಲ್ಲ!

**ಒಂದನೆಯುವ.**—ಸ್ವಲ್ಪ ಸಮಯಾನಂತರ “ಇದೇನು? ಸ್ವಪ್ನ!” ಎಂದು ಹಾಸಿಗೆಯನ್ನು ಮುಟ್ಟಿ ನೋಡಿದರು. ಹಾಸಿಗೆಯನ್ನು ತಡವಿ ನೋಡಿದರು. ಸ್ವಪ್ನವೆಂದು ತಿಳಿಯಿತು ಖಾವಂದರಿಗೆ!

**ಎರಡನೆಯುವ.**— ಕೆಲವರಿಗೆ ನಡೆದುದರ ನಿಜವನ್ನು ತಿಳಿಯುಲು ಅಷ್ಟು ಕಷ್ಟವಾಗುತ್ತವೆ.

**ಒಂದನೆಯುವ.**— ಮತ್ತೆ ಹೇಳಿದ, ರಾತ್ರಿ ಯಾವುದೋ ಒಂದು ಪಿಶಾಚಿಯು ಬಂದು ಮೈಗೆ ಬೆಂಕಿ ಹಾಕಿತು ಎಂದು ಸ್ವಪ್ನವನ್ನು ಕಂಡೆ. ಆಗ ಬೆಚ್ಚಿಬಿದ್ದು ಅರಚಿದೆ ಎಂದು.

**ಎರಡನೆಯುವ.**— ಪಿಶಾಚಿಗಳು ಬೆಂಕಿ ಹಾಕುವುದಿಲ್ಲ. ಮನುಷ್ಯರೇ ಅಂತಹ ಅನರ್ಥಗಳನ್ನು ಮಾಡುವುದು.

**ಒಂದನೆಯುವ.**— ಮತ್ತೆ ಶಹನು 'ಬೆಳಗಿನ ಜಾವ; ದುಃಸ್ವಪ್ನ; ಏನಿದು ಅಶುಭ?' ಎಂದು ಕೇಳಿದ.

**ಎರಡನೆಯುವ.**— ಇನ್ನೊಮ್ಮೆ ಸುಖ ನಿದ್ರೆಯನ್ನು ಮಾಡು, ಶುಭ ಸ್ವಪ್ನವನ್ನು ಕಾಣು, ಎಂದು ಹೇಳಲಿಲ್ಲ ನೀನು?

**ಒಂದನೆಯುವ.**— "ಯುದ್ಧ ಮಾಡಿ ಆಯಾಸವಾಗಿದೆ ಖಾವಂದರಿಗೆ. ಬಳಲಿದ ಮನಸ್ಸಿಗೆ ಏನೇನೋ ಕಂಡಿತು" ಎಂದೆ. 'ಸ್ವಪ್ನವೆಂದರೆ, ಆಗುವುದರ ದೂತ; ಮುಂದಿನ ಕರ್ಮವೃಕ್ಷದ ಸಸಿ' ಎಂದು ಸ್ವಲ್ಪ ಹಂಬಲಿಸಿದ.

**ಎರಡನೆಯುವ.**— ಒಂದು ಕುಪ್ಪಿ ಆಸವವನ್ನು ಕೊಟ್ಟಿದ್ದರೆ ಸಸಿ ತೇಲಿ ಹೋಗುತ್ತಿತ್ತು.

**ಒಂದನೆಯುವ.**— ಹಾಗೆಯೇ ಮಾಡಿದೆನೆನ್ನು.

**ಎರಡನೆಯುನ.**— ದೊಡ್ಡವರ ರೋಗಕ್ಕೆ ಮದ್ಯವೆ ಮದ್ದು! ಮತ್ತಾದರೂ ಸುಖನಿದ್ರೆ ಆಯಿತೋ ಇಲ್ಲವೋ?

**ಒಂದನೆಯುವ.**— ರಾತ್ರಿಯ ಸೈದಿಲೆಗಳು ಕಣ್ಣು ಮುಚ್ಚಿದಾಗ, ಮುಂಜಾವದ ತಂಗಾಳಿ ಮೆಲ್ಲನೆ ಬೀಸಿ ಮುಖದ ಮೇಲೆ ಹನಿ ಹನಿಯಾಗಿದ್ದ ಕಣ್ಣೀರನ್ನು ಮೆಲ್ಲನೆ ತೊಡೆದಾಗ, ಆಕಾಶದ ಸೂರ್ಯನು ಮೊಗವೆತ್ತಿ ನೋಡಿದಾಗ, ಅವನ ಕಣ್ಣರೆಪ್ಪೆಗಳು ಕೂಡಿದುವೆಂದು ತೋರುತ್ತದೆ.

**ಎರಡನೆಯುವ.**— ಇನ್ನು ಫಕ್ಕನೆ ತೆರೆಯದಿರಲಿ.

**ಒಂದನೆಯುವ.**— ಎಂತಹ ಹುಚ್ಚು ದೊಡ್ಡವರಿಗೆ?

**ಎರಡನೆಯುವ.**—ಅದನ್ನೇ ನಾನು ಇದುವರೆಗೆ ವಿಶೇಷ ವಿಶೇಷ. ಎಂದುದು.

**ಒಂದನೆಯುವ.**—ಸತ್ತ ರಜಪೂತರಿಗೂ ಹೆದರುತ್ತಾನೆ.

**ಎರಡನೆಯುವ.**—ಸತ್ತವರ ಪ್ರೇತಬಾಧೆಯುದು!

**ಒಂದನೆಯುವ.**—ಹುಡುಗಿ ಸಿಕ್ಕುತ್ತಾಳೊ ಇಲ್ಲವೊ ಎಂದು ಸಂದೇಹ.

**ಎರಡನೆಯುವ.**—ಅವಳೇ ಸ್ವಪ್ನದಲ್ಲಿ ಇವನ ಮನಸ್ಸನ್ನು ಸಟ್ಟುಗ ದಿಂದ ತೊಳಸುತ್ತಾಳೆ.

**ಒಂದನೆಯುವ.**—ಅದರಿಂದಲೇ ಅಶುಭಸ್ವಪ್ನ.

**ಎರಡನೆಯುವ.**—ಅದರಿಂದಲೇ ತಲೆಗೆ ಬೆಂಕಿ.

**ಒಂದನೆಯುವ.**—ಎಂತಹ ಜೀವಿ! ಹದಿನೈದು ಸಾವಿರ ತರುಣ ವೀರರು ರಕ್ತವನ್ನು ಬಸಿದರೂ ಇವನ ಆಶಾಲತೆ ಹೂಬಿಡಲಿಲ್ಲ.

**ಎರಡನೆಯುವ.**—ಮುದುಕರಿಗೆ ಅಂತಹ ಆಸೆ ಹೆಚ್ಚು!

**ಒಂದನೆಯುವ.**—ಈ ಸೈನಿಕರ ಹೆಂಡಿರು ಮಕ್ಕಳು ಎಷ್ಟು ಗೋಳಾ ಡುತ್ತಾರೋ! ಸ್ವರ್ಗ ನರಕದ ಕಾವಲುಗಾರರಿಗೂ ನಿದ್ರಾಭಂಗವಾಗಿರಬೇಕು.

**ಎರಡನೆಯುವ.**—ಇವನಿಗೆ ನಿದ್ದೆ!

**ಒಂದನೆಯುವ.**—ದೊಡ್ಡವರ ಜೀವನವೇ ಹೀಗೆ.

**ಎಡನೆಯುವ.**—ಅವರ ಜೀವನದಲ್ಲಿ ಎರಡೇ ಅಂಕ!—ಸುಖನಿದ್ರೆ; ಅದು ತಪ್ಪಿದರೆ ಹೆಣ್ಣಿನ ಭ್ರಾಂತಿ!

**ಒಂದನೆಯುವ.**—ಲೀಲಾವತಿಯ ಕಡೆಗೆ ಹೋದ ದೂತರು ನಿನ್ನೆ ಸಂಜೆಗೆ ಹಿಂದಿರುಗಿದರು.

**ಎರಡನೆಯುವ.**—ಹೋದ ಕೆಲಸ ಆಯಿತೇ ?

**ಒಂದನೆಯುವ.**—ಆಗದೇನು? ಅವಳಿನ್ನು ಬೇಗನೆ ಶಹನ ಎಡ ಬದಿಯಲ್ಲಿ ಕುಳಿತುಕೊಳ್ಳುವಳು.

**ಎರಡನೆಯುವ.**—ಎಡಬದಿಗೊಂದು ಹೆಣ್ಣು ಸಿಕ್ಕಿತು. ಹದಿನೈದು ಸಾವಿರ ವೀರರು ಮಡಿದುದಕ್ಕೆ ಫಲ ದೊರೆಯಿತು.

**ಒಂದನೆಯವ.**—ನಮಗೇನು ಫಲ?

**ಎರಡನೆಯವ.**—ಬರ್ಚಿಯ ಏಟುಗಳಿಂದ ಮೈಯಲ್ಲಿ ತೂತಾಗಲಿಲ್ಲವೇ? ಅದೇ ಫಲ.

**ಒಂದನೆಯವ.**—ಹೋಗೋಣ. ಶಹನು ಏಳುವ ಸಮಯವಾಯಿತು.

**ಎರಡನೆಯವ.**—ಇಷ್ಟು ಬೇಗನೆ?

**ಒಂದನೆಯವ.**—ಯಾವಾಗಲೂ ಈ ಸಮಯಕ್ಕೇಳುತ್ತಾನೆ.

**ಎರಡನೆಯವ.**—ಬಿದ್ದವರು ಏಳುವುದಕ್ಕೂ ಎದ್ದವರು ಬೀಳುವುದಕ್ಕೂ ಆ ಸಮಯ ಈ ಸಮಯ ಎಂದಿಲ್ಲ. ಬರುತ್ತೇನೆ; ಹೋಗೋಣ!

## ದೃಶ್ಯ ೩

[ಕೆಲ ದಿವಸಗಳ ಅನಂತರ. ಶಹನ ಡೇರೆ. ರುಸ್ತುಂ, ರಹೀಂ ಎಂಬಿಬ್ಬರು ಮಾತಾಡುತ್ತಾರೆ. ಒಬ್ಬನು ಗೃಹಾಧ್ಯಕ್ಷ, ಇನ್ನೊಬ್ಬನು ಸೈನ್ಯದ ಚಿಕ್ಕ ಅಧಿಕಾರಿ.]

**ರುಸ್ತುಂ.** — ಎಂತಹ ಹುಚ್ಚು ಶರತ ರಹೀಂ? ಇದಕ್ಕೆ ಶಹನೇಕೆ ಒಪ್ಪಿದ?

**ರಹೀಂ.** — ಶರತವೊಂದೇ ಹುಚ್ಚಲ್ಲ. ಇದು ವರೆಗೆ ಮಾಡಿದುದೆಲ್ಲಾ ಹುಚ್ಚು.

**ರುಸ್ತುಂ.** — ಸಿಕ್ಕಿದಾಗ ಹುಡುಗಿಯನ್ನು ಹೆಡಮುರಿಗಟ್ಟಿ ತರಿಸುವುದಲ್ಲದೆ, ಬೇಡದ ಶರತಗಳಿಗೆ ಒಪ್ಪಿಗೆ ಕೊಡುವುದೆಂದರೇನು?

**ರಹೀಂ.** — ಲೋಕವಿಜಯಿಗಳಿಗೆ ಜನರನ್ನು ಸದೆಬಡಿಯುವುದರಲ್ಲಿ ಮಾತ್ರ ಬುದ್ಧಿ ಪ್ರತಾಪ. ಇಂತಹ ಸಂದರ್ಭದಲ್ಲಿ ಹುಚ್ಚೇ ಸರಿ.

**ರುಸ್ತುಂ.** — ಅವರ ಮೆದುಳು ಕುಂಬಾರನ ಚಕ್ರದಂತೆ ಭ್ರಮಿಸುವುದೆಂದರೆ!

**ರಹೀಂ.** — ದೊಡ್ಡತನದ ಮಹಿಮೆಯೇ ಹಾಗೆ. ಸಾಮಾನ್ಯರು ಒಲ್ಲದ ವಿಷಯುಗಳಲ್ಲಿ ಸಾಹಸ. ಸಾಮಾನ್ಯರಿಗೆ ಅರಿವ ವಿಷಯುಗಳಲ್ಲಿ ಭ್ರಾಂತಿ.

**ರುಸ್ತುಂ.** — ಹಾಗೆಯೇ ಸರಿ. ಅಲ್ಲನ ಸೃಷ್ಟಿಯೇ ಹಾಗೆ. ಲೋಕದಲ್ಲಿ ಅಗಣಿತ ಮನುಷ್ಯ ಪ್ರಾಣಿಗಳನ್ನು ಸೃಷ್ಟಿಸಿದ. ಎಲ್ಲರಿಗೂ ಬುದ್ಧಿಯನ್ನು ಹಂಚಿಕೊಟ್ಟ. ಕೆಲವರಿಗೆ ವಿಶೇಷತ ಬರಬೇಕೆಂದು ಉಳಿದವರಿಗೆ ಕೊಟ್ಟುದನ್ನೇ ಕೊಡಲಿಲ್ಲ. ಇದರಿಂದಲೇ ಈ ಸ್ಥಿತಿ!

**ರಹೀಂ.** — ಮಹನೀಯರಿಗೂ ಅಲ್ಪರಿಗೂ ಇರುವ ಭೇದವು ಇದುವೆ ರಹೀಂ. ಸಾಮಾನ್ಯರ ಭ್ರಾಂತಿ ಎಲ್ಲರಿಗೂ ತಿಳಿಯುತ್ತದೆ. ಮಹನೀಯರ, ದೇವರ ಜೊಚ್ಚಲು ಮಕ್ಕಳ — ಹುಚ್ಚಿನ ಅರ್ಥವೇನೆಂದು ಯಾರಿಗೂ ತಿಳಿಯುವುದಿಲ್ಲ. ಅವರ ಹುಚ್ಚಿಗೂ ಅಲ್ಲನು ಗೌರವ ರೂಪವನ್ನು ಕೊಟ್ಟಿದ್ದಾನೆ.

**ರುಸ್ತುಂ.**—ಇಲ್ಲದಿದ್ದರೆ ಎಂತಹ ಮಂಕು! ಕಾಡು ಹಂದಿಗಳು ಗೆಡ್ಡೆ ಗೆಣಸುಗಳನ್ನು ಅಗೆಯಲು ದಾಡೆಯಿಂದ ನೆಲವನ್ನು ಸೀಳುವಂತೆ ಒಂದು ಹೆಣ್ಣಿಗಾಗಿ ಆಹೋರಿನ ಕಲ್ಲುಗಳನ್ನೂ ಅಡಿಮೇಲು ಹಾಕಿದ. ಆ ಬಡವೆ ಕೈಗೆ ಸಿಕ್ಕುವಾಗ ಈ ವಿಕಾರ.

**ರಹೀಂ.**—ಇದಕ್ಕೆ ಪ್ರಣಯವಿಲಾಸವೆಂದು ಹೆಸರು.

**ರುಸ್ತುಂ.**—ಇದನ್ನೇ ಪ್ರಲಯ ವಿಲಾಸವೆಂದೂ ಹೇಳಬಹುದು. ಎಷ್ಟು ಮಂದಿ ಸ್ತ್ರೀಯರ ಹೃದಯದಲ್ಲಿ ಕ್ಷತವಾಗಲಿಲ್ಲ? ಈಗಲೂ ನೆತ್ತರು ಸುರಿಯುತ್ತಿಲ್ಲ?

**ರಹೀಂ.**—ಆ ನೆತ್ತರನ್ನು ಹೀರಿಯೇ ರಾಜವಿಲಾಸವು ಕುಡಿ ಬಿಡುತ್ತದೆ.

**ರುಸ್ತುಂ.**—ರಹೀಂ! ಇನ್ನೊಂದು ಭೀತಿ ನನಗೆ. ಹೇಗೂ ಯುದ್ಧ ವಾಯಿತು, ರಜಪೂತ ಸಿಂಹಗಳ ಕೋರೆದಾಡೆಗಳಿಂದ ಬದುಕಿ ಬಂದೆವು. ಇನ್ನೂ ಹೀಗೆ ಮೃತ್ಯುವನ್ನು ಆಮಂತ್ರಿಸುತ್ತಾನಲ್ಲ?

**ರಹೀಂ.**—ಏನು ಹೇಳಿದೆ?

**ರುಸ್ತುಂ.**—ಮತ್ತೇನು ರಹೀಂ? ಆ ಪೋರಿಯ ಶರತಗಳಲ್ಲಿ ಏನಾದರೂ ಮೋಸವಿರಲೇ ಬೇಕು.

**ರಹೀಂ.**—ಮೋಸ?

**ರುಸ್ತುಂ.**—ಸಂದೇಹವೇನು? ತಾಯ್ತಂದೆಗಳನ್ನು, ಹೆಚ್ಚೇನು, ಸಮಗ್ರ ರಜಪೂತವಂಶವನ್ನು ಯುದ್ಧದ ಮಾರಿಗೆ ಬಲಿಯಿತ್ತ ಹೆಣ್ಣು ವಿರೋಧಿಗೆ ವಸ್ತ್ರಾಭರಣಗಳನ್ನು ಕಳುಹಿಸುವಳೇ?

**ರಹೀಂ.**—ಹುಂ.

**ರುಸ್ತುಂ.**—ಅವಳು ಕಳುಹಿಸಿದ ನಿಲುವಂಗಿಯೊಳಗೆ ಮೃತ್ಯು ತಲೆ ಮರಸಿದೆಯೆಂದು ಭಾವಿಸಿಕೊ. ಆ ಸರದ ಪ್ರತಿಯೊಂದು ಎಳೆಯೂ ಮೃತ್ಯುಪಾಶವೆಂದು ಭಾವಿಸಿಕೊ.

**ರಹೀಂ.**—ಆಭರಣದ ವಿಷಯವು ಹೇಗೆ ಬೇಕಾದರೂ ಇರಲಿ. ಆಳುವವರ ಮನಸ್ಸು ಹೀಗೆ ಕೆಟ್ಟ ಮೇಲೆ ಪ್ರಲಯವು ಬರಲೇ ಬೇಕು. ನಾಳೆಯೊ ಇಂದೊ ಎಂಬುದಿಷ್ಟೇ ವಿಚಾರ.

**ರುಸ್ತುಂ.**—ನಾಳೆ ಅಲ್ಲ; ಇಂದೆ!

**ರಹೀಂ.**—ಇಷ್ಟು ಹುಚ್ಚೇರಿದ ಮೇಲೆ ಜನರು ಬದುಕುವುದಿಲ್ಲ.

**ರುಸ್ತುಂ.**—ಅವಳ ನಗೆಯನ್ನು ನಂಬಿದ, ಮೃದು ನುಡಿಗಳ ಆಳದಲ್ಲಿರುವ ಮೊಸಳೆಗಳನ್ನು ನೋಡದೆ ದುಮ್ಮಿಕ್ಕಿದ!

**ರಹೀಂ.**—ಬಲು ಸೋಜಿಗ ರುಸ್ತುಂ. ಅರಮನೆಯ ಅಲಂಕಾರ ಕೋಶದಲ್ಲಿ ಅಗಣಿತ ಹಾರಗಳಿವೆ. ಅವಳ ಆಭರಣಗಳಿಲ್ಲದೆ ಗತಿಯಿಲ್ಲವೇ ಆತನಿಗೆ?

**ರುಸ್ತುಂ.**—ಇದುವರೆಗೆ ಗತಿಯಿತ್ತು, ಇನ್ನಿಲ್ಲ!

**ರಹೀಂ.**—ನೀನಾದರೂ ಶಹನಿಗೆ ಹೇಳಲಿಲ್ಲವೇ?

**ರುಸ್ತುಂ.**—ಹೇಳದಿರಲಿಲ್ಲ. ಆದರೆ ಕಷ್ಟಕಾಲ ಹೋದ ಮೇಲೆ ಆಪ್ತವಾಕ್ಯಕ್ಕೆ ಬೆಲೆಯುಂಟೇ? ಇನ್ನು ಇದರ ಬೆಲೆ ಏರ ಬೇಕಾದರೆ ಮತ್ತೊಮ್ಮೆ ಕಷ್ಟಬರಬೇಕು.

**ರಹೀಂ.**—ಬಾದಶಹನು ಏನೆಂದ?

**ರುಸ್ತುಂ.**—ಹೇಳಿದುದಿಷ್ಟೆ! ರಾಜ್ಯತಂತ್ರದಲ್ಲಿ ಮಾತ್ರ ನಿನ್ನಂಥವರ ಸೂಚನೆ ಅವಶ್ಯ, ಪ್ರಣಯತಂತ್ರದಲ್ಲಿ ಬೇಡ!

**ರಹೀಂ.**—ನಮ್ಮ ಶಹನು ಎಂಥವನಾದರೂ ಕೆಲ ವರ್ಷವಾದರೂ ಬದುಕಿರಬೇಕೆಂದು ಅವನು ಕೊಟ್ಟ ಉಪ್ಪನ್ನವು ಹೇಳಿಕೊಡುತ್ತದೆ.

**ರುಸ್ತುಂ.**—ಆದುದರಿಂದಲೇ ಹೇಳಿದೆ ಇದನ್ನು. ಆದರೆ ಮಾಡುವುದೇನು? ಕಿವಿ ಕಿವುಡಾಗಿತ್ತು. ಅಲ್ಲ, ಬುದ್ಧಿ ಕುರುಡಾಗಿತ್ತು.

**ರಹೀಂ.**—ವಿಚಾರವು ಕುಂಟುಗಾಲು ಹಾಕುತ್ತಿತ್ತು.

**ರುಸ್ತುಂ.**—ಆದುದೆಲ್ಲಾ ಆಗುತ್ತದೆ. ನಾವೇನು ಮಾಡಬಹುದು?

**ರಹೀಂ.**—ಜೇಡನ ಬಲೆಗೆ ತಾನಾಗಿ ನೊಣ ಬೀಳುತ್ತದೆ.

**ರುಸ್ತುಂ.**—ಐದು ಸಾವಿರ ರಜಪೂತರ ಖಡ್ಗಗಳಿಗೆ ಹೆದರದ ದೇಹ ಈಕೆಯ ಒಂದು ಮಾತಿನಿಂದ ಇಂದು ಭಸ್ಮರಾಶಿಯಾಗಿ ಬೀಳುತ್ತದೆ.

**ರಹೀಂ.**—ಕಷ್ಟ!

**ರುಸ್ತುಂ.**—ಕಷ್ಟ ಮಾತ್ರವಲ್ಲ, ಅಪಮಾನ.

[ಅಷ್ಟರಲ್ಲಿ ತೆರೆಯಲ್ಲಿ ಅನರ್ಥ! ಸರ್ವನಾಶ!! ಎಂಬ ರೋದನ]

**ರುಸ್ತುಂ.**—ಏನಿದು? ನರಕ ಬಲವೇ ನೆಲಕ್ಕೆ ಬಂತೇ?

**ರಹೀಂ.**—ಆಗುಳಿಯನ್ನಿಕ್ಕು!

(ರುಸ್ತುಂ ಖಡ್ಗವನ್ನು ಹಿರಿದು ಓಡುತ್ತಾನೆ; ಅವನ ಹಿಂದೆ ರಹೀಂ; ಅಷ್ಟರಲ್ಲಿ ಜನರ ದೊಡ್ಡ ಗುಂಪು ಬೆಂಕಿ! ಬೆಂಕಿ!! ಊರೇ ಬೆಂಕಿ!!! ಶಹನು ಕೆಂಡವಾಗಿದ್ದಾನೆ! ಎಂದು ಬೊಬ್ಬೆ ಹೊಡೆದು ಬರುವುದು.)

**ರುಸ್ತುಂ** (ಸ್ತಂಭೀಭೂತನಾಗಿ).—ಏನಿದು ಅನಾಹುತ?

**ಗುಂಪು.**—ಬೆಂಕಿ! ಬೆಂಕಿ!

**ರುಸ್ತುಂ.**—ಎಲ್ಲಿ?

**ಗುಂಪು.**—ಎಲ್ಲೆಲ್ಲಿಯೂ ಬೆಂಕಿ.

**ರುಸ್ತುಂ.**—ಶಹನೆಲ್ಲಿ?

**ಒಬ್ಬ.**—ಎಲ್ಲಿಯೂ ಇಲ್ಲ. ಕೆಂಡವಾಗಿ ಬಿದ್ದಿದ್ದಾನೆ.

**ಇನ್ನೊಬ್ಬ.**—ಭಸ್ಮದ ರಾಶಿಯಾಗಿದ್ದಾನೆ.

**ರುಸ್ತುಂ.**—ಹಾ! ಅಲ್ಲ! ಏನೆಲ್ಲ ಮಾಡಿದೆ?

**ಮತ್ತೊಬ್ಬ.**—ಅಲ್ಲನು ಏನೂ ತಪ್ಪು ಮಾಡಲಿಲ್ಲ. ಆ ಪೋರಿಯ ಮೋಸ!

**ರುಸ್ತುಂ.**—ಅವಳೇನು ಶಹನ ದೇಹಕ್ಕೆ ಬೆಂಕಿ ಕೊಟ್ಟಳೇ?

**ಒಬ್ಬ.**—ಹೌದು; ಅವಳು ಕಳುಹಿಸಿದ ವಸ್ತ್ರಾಭರಣ ವ್ಯತ್ಯಯಿನದು.

**ರುಸ್ತುಂ.**—ಏನದ್ಭುತ!

**ಮತ್ತೊಬ್ಬ.**—ಕನ್ನಿಕೆಯನ್ನು ಇದಿರುಗೊಳ್ಳುವ ಸಂಭ್ರಮದಲ್ಲಿ ಮದುವಣಿಗನ ವೇಷವನ್ನು ಧರಿಸಿ ಅಂಗಳಕ್ಕಿಳಿದುದೇ ತಡ. ದೇಹದ ಎಲ್ಲಾ ಕಡೆಗಳಿಂದ ಸಾವಿರ ಸರ್ಪಗಳು ಜಡೆಯೆತ್ತಿ ಬುಸುಗುಟ್ಟಿ ಮೇಲೇಳುವಂತೆ ಅಗ್ನಿ ಜ್ವಾಲೆಗಳೆದ್ದುವು.

**ಇನ್ನೊಬ್ಬ.**—ಮದುವಣಿಗನಾಗಿದ್ದ ಶಹನು ನಿಮಿಷಾರ್ಧದಲ್ಲಿ ಭಸ್ಮದ ರಾಶಿ.

**ರುಸ್ತುಂ.**—ಹಾ! ದುರ್ದೈವಕ್ಕೆ ದಾರಿಯಾವೆಡೆಯಲ್ಲಿಲ್ಲ! ಪ್ರಣಯ ದೊಳಗಿಂದಲೂ ಮೃತ್ಯು ಇಣಿಕಿ ನೋಡುತ್ತದೆ!

**ಒಬ್ಬ ಮುದುಕ.**—ಅಲ್ಲ; ಸಂಕಲೆ ಬಿಟ್ಟ ನಾಯಿಯಂತೆ ಹಾರಿ ಬೀಳುತ್ತದೆ.

**ರುಸ್ತುಂ.**—ಖುದ! ನೀನೇ ದೊಡ್ಡವ. ನಾವೆಲ್ಲಾ ಏನೂ ಅರಿ ಯದ ಮಕ್ಕಳು.

**ಇನ್ನೊಬ್ಬ.**—ಹೌದು; ಮಕ್ಕಳು.

**ರುಸ್ತುಂ.**—ಅಳಿದವರು ಹೋದರಲ್ಲಾ; ಉಳಿದವರ ಪಾಡೇನು?

**ಒಬ್ಬ.**—ಅಳಿವಿನ ಕಾರಣವನ್ನು ನಾಶಮಾಡುವುದು.

**ರುಸ್ತುಂ.**—ಇದು ಸಾಧ್ಯವೇ? ಯಾವ ಕಾರಣವಿಲ್ಲದೆಯೂ ಅಳಿವು ಬರುತ್ತದೆ.

**ಒಬ್ಬ.**—ಕಣ್ಣೀರು ಸುರಿಸುತ್ತಾ ಕಾಲವನ್ನು ಕಳೆಯುವುದು. ಕಾರಣವಿಲ್ಲದ ಮೃತ್ಯು ಬರುವಾಗ ಸಂತೋಷದಿಂದ ಕಣ್ಮುಚ್ಚುವುದು.

**ರುಸ್ತುಂ.**—ಆ ವರೆಗೆ ಈ ವಿನಾಶ ದೃಶ್ಯವನ್ನು ನೋಡುತ್ತಾ ವಿಧಿ ಯನ್ನು ದೂರುವುದು.

## ದೃಶ್ಯ ೪

[ಪ್ರಾತಃಕಾಲ; ಒಂದು ಗುಡಿಸಲು; ಲೀಲಾವತಿಯೊಬ್ಬಳೇ ನಿಶ್ಚಿಂತ ಭಾವದಿಂದ ಕುಳಿತಿರುವಳು.]

**ಲೀಲಾವತಿ.**—ಎಲ್ಲರೂ ಒಂದು ದಿನ ಸಾಯಲೇ ಬೇಕು. ದೂರದ ಗೋವಳನ ಕೊಳಲಿನ ನಾದವನ್ನು ಕೇಳಿದೊಡನೆ ಅರೆಕಚ್ಚಿದ ಮೇವನ್ನು ಅಲ್ಲಿಯೇ ಬಿಟ್ಟು ಓಡುವ ಪಶುಗಳಂತೆ ಪರಲೋಕದ ಕರೆ ಬಂದೊಡನೆ, ತೊಡಗಿದ ಕೆಲಸಗಳನ್ನು ಅಲ್ಲಲ್ಲಿಯೇ ಬಿಟ್ಟು ಪ್ರತಿಯೊಬ್ಬನೂ ಹೋಗಲೇ ಬೇಕು. ಆಡಿ ಬಳಲಿದ ಮಕ್ಕಳನ್ನು ಸಂಜೆಯಲ್ಲಿ ಹೆತ್ತ ತಾಯಿ ವಿಶ್ರಾಂತಿಗಾಗಿ ಕರೆಯುವುದಿಲ್ಲವೇ ? ಆ ಮಕ್ಕಳು ಸಂತೋಷದಿಂದ ಅವಳ ಸೆರಗನ್ನು ಸೇರುವುದಿಲ್ಲವೇ ? ಯಾವುದಕ್ಕೆ ಮರಣವಿಲ್ಲ? ದಿನವೇ ಸತ್ತು ಅದರ ತೇಜಸ್ಸು ನಕ್ಷತ್ರಗಳನ್ನು ಹೊಕ್ಕು ಅಲ್ಲಿಂದ ಎವೆಯಿಕ್ಕದೆ ನೋಡುವುದಿಲ್ಲವೇ? ಕೀರ್ತಿಕಾಯಕ್ಕೆ ಮಾತ್ರ ಅಳಿವಿಲ್ಲ. ಅದು ಅನಂತ. ಕೀರ್ತಿ ಸಂಪಾದನೆ ಮಾಡದಿದ್ದರೂ ಸರಲಮುಗ್ಧಭಾವಕ್ಕೆ ಸಾವಿಲ್ಲ. ಅದು ಪ್ರಕೃತಿಯನ್ನು ಸೇರಿ ನಿತ್ಯವೂ ಭಾವಿಕರ ಕಣ್ಣ ಮುಂದೆ, ಕಾಡ ಹೂವಾಗಿಯೋ ಗುಳು ಗುಳಿಸುವ ಬುಗ್ಗೆಯಾಗಿಯೋ ಹಚ್ಚನೆಯ ಹಸಲೆಯಾಗಿಯೋ ಗೋಚರಿಸುವುದು. ಹೌದು, ಪನ್ನೆ ಸತ್ತಳು; ಸಾಯಲಿಲ್ಲ, ಇನ್ನೂ ಬದುಕಿರುವಳು. ಪ್ರಕೃತಿಯ ಮುಗ್ಧತಾ ರಾಶಿಯಲ್ಲಿ ಎಲ್ಲಿಯೋ ಲೀನವಾಗಿ ಹೋದಳು. ಹೌದು, ಆಕೆ ಸಾಯುವಾಗ ಅತ್ತವರಿಲ್ಲ; ಹೊಟ್ಟೆ ಹೊಡೆದುಕೊಂಡವರಿಲ್ಲ. ಲೋಕವು ಅವಳಂತಹ ಜೀವಿಗಳಿಗೆ ಬೆಲೆ ಕೊಡುವುದೇ? ಬೆಲೆಯೆಂದರೆ ಮನುಷ್ಯನ ಕಲ್ಪನೆ. ಪರಮಾತ್ಮ ಸೃಷ್ಟಿಯ ಸೊಬಗನ್ನು ತೂಗುವೆನೆನ್ನುವ ಮನಷ್ಯನ ಮಾಟ. ಅಹಂಕಾರದ ಸ್ಫುರಣೆ. ಅದಕ್ಕೆ ಸಿಕ್ಕಲಿಲ್ಲ ನನ್ನ ಪನ್ನೆ. ಕಾಸಿನ ಬೆಲೆಯಿಲ್ಲದ ಜೀವನ, ನನಗೆ ಇಂದು ತನಕ ಉರುಗೋಲಂತಿದ್ದಿತು. ಇನ್ನಿಲ್ಲ; ಲೋಕಕ್ಕೂ ಇಲ್ಲ; ನನಗೂ ಇಲ್ಲ. ಈ ಅಭಾವವು ಮದೋನ್ಮತ್ತ ಪ್ರಪಂಚಕ್ಕೆ ಅರಿಯದು; ನನ್ನ ಹೃದಯವನ್ನು ಇರಿಯದೆ ಬಿಡದು. ಯಾರಿಗೂ ತಿಳಿಯದೆ ಬಂದಳು; ಯಾರಿಗೂ ಅರಿಯದೆ ಹೋದಳು. ಅವಳೇ ಆಮಂತ್ರಿಸುತ್ತಿದ್ದ ಮೃತ್ಯು ಕಳ್ಳನಂತೆ ಬಂದನು.

ಪ್ರಾಣವನ್ನು ಕದ್ದೊಯ್ದನು. ಹಾ ಪನ್ನೆ! ನಿನ್ನನ್ನು ನಾನು ಮರೆಯುವುದು
ಹೇಗೆ? ನಿನ್ನ ನಿಷ್ಪಾಪಸೇವೆಯನ್ನು ಇನ್ನೆಲ್ಲಿ ಕಾಣಬೇಕು? ಮೂಢವಾದರೂ
ನಿರ್ಭರವಾದ ಭಕ್ತಿಯನ್ನು ಇನ್ನೆಲ್ಲಿ ಪಡೆಯಬೇಕು? ಅರ್ಥವಿಲ್ಲದ ಪ್ರೇಮ
ಮುಗ್ಧಭಾಷಿತಗಳನ್ನು ಇನ್ನೆಲ್ಲಿ ಕೇಳಬೇಕು? ಎಲ್ಲಿಯೂ ಇಲ್ಲ. ಪನ್ನೆ
ಹೋದಳು. ಅರ್ಥವಾಗದ ಹಾಡು ಮರೆತು ಹೋಗುವಂತೆ, ಇವಳ
ಜೀವನವು ಈ ವಿಶಾಲ ಸೃಷ್ಟಿಯಲ್ಲಿ ಎಲ್ಲಿಯೋ ಮರೆಯಾಯಿತು. ಎಲ್ಲಾ
ದರೂ ನಿಂತು ನನ್ನನ್ನು ನೋಡುತ್ತಿರುವೆಯಾ, ಪನ್ನೆ? ಅಥವಾ ಮುಂಜಾವದ
ಆಕಾಶಮಂಡಲವನ್ನು ಸುತ್ತಿ ಮಾಯವಾಗುವ ಕತ್ತಲೆಯ ತೆಳ್ಳಂಚಿನಲ್ಲಿ
ಸೇರಿ ಕಾಣದಾದೆಯಾ? ಹೇಗೂ ಇರಲಿ. ನಿನ್ನ ಸ್ಮರಣೆ ಎಲ್ಲೆಲ್ಲಿಯೂ
ಹೊಮ್ಮುತ್ತಿದೆ, ಪನ್ನೆ! ಬಂದೆ ಪನ್ನೆ! ಬಂದೆ! ಒಂದೇ ಒಂದು ಬಯಕೆ
ಉಳಿದಿದೆ. ಅಯ್ಯೋ ಪ್ರತೀಕಾರ!—ಅದಾಗದಿದ್ದರೂ ಸಾಯುತ್ತೇನೆ.
ಆದರೆ ಕೃತಕೃತ್ಯತೆಯು ಸ್ವಚ್ಛಂದತೆಯಿಂದಲ್ಲ. ಹಗ್ಗ ಹರಿದ ಮೇಲೆ
ಮೇಲಕ್ಕೂ ಕೆಳಕ್ಕೂ ಏಳುತ್ತಾ ಬೀಳುತ್ತಾ ತೇಲುತ್ತಾ ತೇಂಕುತ್ತಾ
ಹೋಗುವ ಗಾಳಿಯ ಪಟದಂತೆ ನನ್ನ ಪ್ರಾಣವು ಹೋದೀತು. ಮತ್ತೆ
ಅದೇ ಪ್ರತೀಕಾರಕ್ಕಾಗಿ ಹುಟ್ಟೀತು. ಹಾಗಲ್ಲದೆ ಪ್ರತೀಕಾರವು ಪೂರೈಸಿ
ತೆಂದರೆ, ಸೂರ್ಯಕಿರಣಸ್ಪರ್ಶದಿಂದ ಜಲಕಣವು ಆರಿ ಆವಿಯಾಗುವಂತೆ
ಈ ಪ್ರಾಣವು ವಿಮೋಚನೆ ಹೊಂದಬಹುದು. ಇವೆರಡರಲ್ಲಿ ಯಾವುದು
ಸಿದ್ಧವೋ ತಿಳಿಯದೆ ಕುದಿಯುತ್ತಿದ್ದೇನೆ. 'ಪ್ರತೀಕಾರ!' ಈ ಶಬ್ದವು
ನಭೋಮಂಡಲವನ್ನು ವ್ಯಾಪಿಸುತ್ತಿದೆ. ಪರ್ವತಶಿಖರವನ್ನು ಹೊಡೆವ
ಅಶನಿಯಾಗಿ ಗುಡುಗುಡಿಸುತ್ತದೆ. ಧೂಮಕೇತುವಿನಂತೆ ಆಕಾಶವನ್ನು
ಸೀಳುತ್ತಿದೆ. ಭೂಕಂಪದಂತೆ ಭೂಗರ್ಭವನ್ನು ಭೇದಿಸುತ್ತಿದೆ. ಪ್ರತೀ
ಕಾರವೇ? ನೀನು ಸಿದ್ಧಿಸುವೆಯೊ ಇಲ್ಲವೊ ಹೇಳು. ಬರುತ್ತೇನೆ,
ಪನ್ನೆ! ಬರುತ್ತೇನೆ! ಎಲ್ಲರ ಅನಂತಯಾತ್ರೆಯ ಪುಣ್ಯಕ್ಷೇತ್ರಕ್ಕೆ ಬರುತ್ತೇನೆ.
(ಸುತ್ತಲೂ ನೋಡಿ) ಯಾರೂ ಇಲ್ಲ. ಶಹನಿಗೆ ಪ್ರತೀಕಾರವಾಯಿ
ತೆಂದು ಹೇಳುವವರು ಯಾರೂ ಇಲ್ಲ. ಗಾಳಿಯಾದರೂ ಮಾತಾ
ಡದೇ? ಗುಡುಗಾದರೂ ಗರ್ಜಿಸಿ ಹೇಳದೇ? ಇದನ್ನು ಕೇಳದೆ
ಪ್ರಾಣವು ಕದಲುವುದಿಲ್ಲ. ಶಾರ್ದೂಲನಾದರೂ ಬದುಕಿಲ್ಲವೇ? ಶಹನು
ಸತ್ತನೆಂದು ಹೇಳುವುದಿಲ್ಲವೇ? ಭಾಗ್ಯಹೀನೆ ನಾನು. ಖಂಡಿತವಾಗಿ ನನ್ನ

ಪ್ರಯೋಗವು ಸಫಲವಾಗಿರಲೇ ಬೇಕು. ಆದರೂ ಸಾಯುವ ಕಾಲಕ್ಕೆ ಆ ಹೃದಯತರ್ಪಣ ವಾರ್ತೆಯನ್ನು ಕೇಳಬಾರದೆಂದು ವಿಧಿನಿಯಮ! ಶಾರ್ದೂಲ! ಶಹನು ಭಸ್ಮರಾಶಿಯಾದನೆಂದು ಹೇಳಿ ಬಿಡು. ಇಲ್ಲ. ಅವನೂ ಮಾಯವಾದ. ರಜಪೂತರ ಒಂದು ಪಿಳ್ಳೆಯೂ ಇಲ್ಲ. ಆಸೆಯ ಬಾಯಿ ಬತ್ತಿ ಸಾಯಬೇಕು. (ಖಡ್ಗವನ್ನೆತ್ತಿ) ಮಹಾಕಾಳೀ! ನನ್ನ ರಕ್ತದಿಂದ ಅಭಿಷೇಕ ಮಾಡುತ್ತೇನೆ. ಪ್ರತೀಕಾರವಾಯಿತೆಂದು ಹೇಳು. ಕೇಳದೆ ಸಾಯುವುದಿಲ್ಲ. ಆದರೂ ನೋಡುತ್ತೇನೆ ಆಸೆ ಯುಂಟೋ ಎಂದು.

[ಗುಡಿಸಲ ಸುತ್ತಲೂ ತಿರುಗಿ ನೋಡುವಳು. ದೂರದಿಂದ ಕುದುರೆಗಳು ಓಡಿ ಬರುತ್ತವೆ].

ಏನಿದು? ಶಾರ್ದೂಲನು ಪ್ರತೀಕಾರವಾರ್ತೆಯನ್ನು ತರುತ್ತಾನೆಯೋ? ಛೆ! ಎಂದೂ ಅಲ್ಲ. ಒಬ್ಬನಲ್ಲ, ಹಲವು ಮಂದಿ ಬರುತ್ತಾರೆ. ಕುದುರೆಗಳ ಖುರದಿಂದೆದ್ದ ಧೂಳಿ ವ್ಯೋಮವನ್ನಾವರಿಸಿದೆ. ನಿಜತ್ವವು ಕಾಣುವುದಿಲ್ಲ. ಹೋಗಲಿ. ಇನ್ನೂ ಉಳಿಯುವುದಲ್ಲ. ಸಾಯುತ್ತೇನೆ.

[ಗುಡಿಸಲನ್ನು ಪ್ರವೇಶಿಸಿ ಖಡ್ಗವನ್ನು ಸೆಳೆದು]

ಭವಾನಿ! ನನ್ನ ಆತ್ಮವನ್ನು ಮಡಿಲಲ್ಲಿ ಮುಚ್ಚಿಕೊ! ಯಾರಿಗೂ ಕೊಡಬೇಡ. ಶತ್ರುಗಳ ಅಪವಿತ್ರ ಹಸ್ತಕ್ಕೆ ಸಿಲುಕದಂತೆ ಮೇಲುದರೊಳಗೆ ಅಡಗಿಸಿಕೊ, ಭವಾನಿ! ಭವಾನಿ! ನೀನು ಪ್ರತೀಕಾರದ ಅಧಿದೇವತೆಯಂತೆ. ಖಡ್ಗಧಾರೆಯ ಹೊಳಪೇ ನಿನ್ನ ನಗೆಯಂತೆ. ಅದರ ಝುಂಕಾರವೇ ನಿನ್ನ ನೂಪುರ ಝುಂಕಾರವಂತೆ! ಅದರ ತೀಕ್ಷ್ಣತೆಯೇ ನಿನ್ನ ಉತ್ಸಾಹ ಶಕ್ತಿಯಂತೆ! ಭವಾನಿ! ನೀನು ರಜಪೂತರ ಆಶ್ರಯದಾತ್ರಿ. ಎಷ್ಟೋ ರಜಪೂತರಿಗೆ ಆಶ್ರಯ ಕೊಟ್ಟೆ. ನನಗೂ ಕೊಡು. ನನಗಿರುವುದು ಒಂದೇ ಒಂದು ಆಸೆ. ಹೃದಯ ರಕ್ತವನ್ನು ಈ ಖಡ್ಗವು ಸವಿ ನೋಡುವುದು. ನನ್ನ ಸ್ಥೂಲದೇಹವು ಲಯಹೊಂದಿ ನಿನ್ನ ಪಾದಧೂಲಿಯಾಗುವುದು ನನ್ನ ಪ್ರಜ್ಞೆ ಹೊಡೆದು ಆರಿಸಿದ ದೀಪದಂತೆ ನಂದಿಹೋಗುವುದು. ನನ್ನ ಅಂತಃಕರಣವು ಗಾಢಾಂಧಕಾರ ಸಮುದ್ರದಲ್ಲಿ ತೇಲುವುದು. ಆಗ ಈ ಪ್ರಾಪಂಚಿಕಸ್ಮರಣಗಳನ್ನೆಷ್ಟೋ ನೀನದರಲ್ಲಿ ಹೇರಬಹುದು. ಆದರೆ ಒಂದನ್ನು ಮರೆಯಬೇಡ. ಆ ಪ್ರತೀಕಾರಸ್ಮರಣೆಯನ್ನು ಮರೆತು ಬಿಡ

ಬೇಡ, ದೇವಿ! (ಸಮೀಪದಲ್ಲಿ ಕುದುರೆಗಳ ಗೊರಸಿನ ಶಬ್ದ). ಅಯ್ಯೋ ಬಂದೇ ಬಿಟ್ಟರು. ನನ್ನ ದೇಹವನ್ನು ಮುಟ್ಟುತ್ತಾರಲ್ಲ! ಮಾಡಲೇನು? ಆತ್ಮಹತ್ಯೆಯೇ ಗತಿ. ಜೋಹರ್ ವ್ರತವೂ ಆತ್ಮಹತ್ಯೆ; ಇದೂ ಆತ್ಮಹತ್ಯೆ. (ಹೀಗೆಂದು ಖಡ್ಗವನ್ನು ಎದೆಗೆ ನೆಟ್ಟು ಅಲ್ಲಿಯೆ ಬೀಳುವಳು.)

[ರುಸ್ತುಂಖಾನ್ ಮತ್ತು ಇಬ್ಬರು ಸೈನಿಕರ ಪ್ರವೇಶ].

**ರುಸ್ತುಂ.**—ಸೈನಿಕರೇ! ಸದ್ದೇನು?

**ಸೈನಿಕ.**—ಏನೋ ಒಂದು ವಸ್ತು ನೆಲಕ್ಕೆ ಬಿದ್ದಂತೆ ಸದ್ದಾಯಿತು.

**ರುಸ್ತುಂ.**—ಒಳನುಗ್ಗಿರಿ; ಹುಡುಕಿರಿ; ಹಿಡಿಯಿರಿ.

(ಸೈನಿಕರು ಗುಡಿಸಲನ್ನು ಪ್ರವೇಶಿಸುವರು).

**ಸೈನಿಕ.**—ಅಯ್ಯೊ! ಇದೇನಪ್ಪ ರಕ್ತದ ಕಾರಂಜಿ!

**ರುಸ್ತುಂ.**—ಜೀವನರಸವನ್ನು ಕಡಿದು ಬಿಟ್ಟು ಯಾರೋ ಮಲಗಿದ್ದಾರೆ.

**ಸೈನಿಕ.**—ಇದೇ ಆ ಮಾಯೆ!

**ರುಸ್ತುಂ** (ಸಮೀಪಕ್ಕೆ ಬಂದು).—ಇಲ್ಲಿ ಮಲಗಿದೆ ಆ ಪ್ರಲಯ ವಿದ್ಯುತ್ತು! ಸೈನಿಕರೇ ನೋಡಿರಿ! ಜೀವವಿದೆಯೊ ಎಂದು.

**ಸೈನಿಕ.**—ಇಲ್ಲ, ಇನ್ನೂ ಸಾಯಲಿಲ್ಲ.

**ರುಸ್ತುಂ.**—ಹಿಡಿದೆತ್ತು; ಶುಶ್ರೂಷೆ ಮಾಡು.

(ಸಮೀಪಕ್ಕೆ ಹೋಗಿ ಮುಟ್ಟಲು ಕೈನೀಡುವರು).

**ಲೀಲಾವತಿ.**—ಯಾರೇ ಆಗಲಿ; ಮುಟ್ಟ ಬೇಡಿರಿ ನನ್ನನ್ನು.

**ರುಸ್ತುಂ.**—ಇನ್ನೂ ಜೀವವಿದೆ; ಹಿಡಿದೆತ್ತು; ಬದುಕಿಸು.

**ಲೀಲಾವತಿ.**—ಜೀವ ಹೋಗದೆ ಉಳಿದಿದೆ. ಈಗಲೇ ಹೋಗುವುದು. ಮುಟ್ಟಬೇಡಿರಿ.

**ರುಸ್ತುಂ.**—ಮುಟ್ಟಬೇಡ. ಕಾಫರಳಾದರೇನು? ಸಾಯುವ ಕಾಲದ ಇಚ್ಛೆ ಸಲಬೇಕು.

**ಲೀಲಾವತಿ.**—ಉರಿ ಹೆಚ್ಚುತ್ತಿದೆ. ಪ್ರಾಣವಿನ್ನೂ ನವೆಯುತ್ತಿದೆ.

**ರುಸ್ತುಂ.**—ನೀರು ತನ್ನಿ, ನೀರು.

**ಲೀಲಾವತಿ.**—ನೀರಿನಿಂದ ಆರದ ಉರಿಯಿದು.

**ರುಸ್ತುಂ.**—ಮತ್ತೇನು ಮಾಡಲಿ!

**ಲೀಲಾವತಿ.**—ಉರಿ! ಉರಿ! ಸಾಯುತ್ತೇನೆ ಸೈನಿಕರೇ! ನೀ-ವಾ-ರು ?

**ರುಸ್ತುಂ.**—ಶಹನ ಸೇವಕರು.

**ಲೀಲಾವತಿ.**—ಈಗಲೇ ಸಾಯುತ್ತೇನೆ. ಹೇಳಿರಿ ಶಹನೆಲ್ಲಿರುವನು ?

**ರುಸ್ತುಂ.**—ಇಲ್ಲ ಹುಡುಗಿ; ಶಹನು ಎಲ್ಲಿಯೂ ಇಲ್ಲ.

**ಲೀಲಾವತಿ.**—ಎಲ್ಲಿಯೂ ಇಲ್ಲ; ಸುಳ್ಳು!

**ರುಸ್ತುಂ.**—ಈ ಸಮಯದಲ್ಲಿ ಸುಳ್ಳು ಹೇಳಬೇಕೇ, ತಾಯಿ ?

**ಲೀಲಾವತಿ.**—ಹೇಗೆ ನಂಬಲಿ ?

**ರುಸ್ತುಂ.**—ಸುಟ್ಟು ಬೂದಿಯಾದ, ತಾಯಿ. ಇನ್ನಿದ್ದರೆ ಶಹನು ಬೂದಿಯ ಕಣಗಳಲ್ಲಿರಬೇಕು.

**ಲೀಲಾವತಿ.**—ಜೀವ ಹೋಗುವುದಿಲ್ಲ, ಸೈನಿಕರೇ! ಪ್ರಮಾಣ ಮಾಡುವಿರೇ ?

**ರುಸ್ತುಂ.**—ಅಯ್ಯೋ ತಾಯಿ! ನಾವು ಯಾವ ಜಾತಿಯವರಾಗಿದ್ದರೂ ಈ ಕಾಲದಲ್ಲಿ ಹುಸಿ ಹೇಳುವೆವೇ ?

**ಲೀಲಾವತಿ.**—ಹಾಗಾದರೆ ಖುರಾನಿನ ಹೆಸರಲ್ಲಿ ಭಾಷೆ ಕೊಡಿರಿ!

**ರುಸ್ತುಂ.**—ಸುಳ್ಳು ಹೇಳಿ ಏನು ಫಲ, ತಾಯಿ? ನಿನ್ನ ಜೀವ ಸುಖವಾಗಿ ಹೋಗಲಿ! ಪಕ್ವವಾದ ಹಣ್ಣಿನಂತೆ ಸುಲಭವಾಗಿ ಬಿದ್ದು ಹೋಗಲಿ! ತಾಯಿ! ನಾವೆಂದುದು ಸತ್ಯ. ಶಹನು ಸತ್ತಿದ್ದಾನೆ. ಆತನ ಅಪಕೀರ್ತಿ ಸಾಯಲಿಲ್ಲ.

**ಲೀಲಾವತಿ.**—ಸೈನಿಕರೇ ದೀರ್ಘಕಾಲ ಬಾಳಿರಿ! (ಕೂಡಲೆ ಮೂರ್ಛೆ ಹೋಗಿ ಸ್ವಲ್ಪ ಸಮಯದಲ್ಲಿ ಪ್ರಾಣೋತ್ಕ್ರಮಣವಾಗುವುದು).

**ರುಸ್ತುಂ** (ಕಣ್ಣನ್ನೊರಸಿ).—ಬಹಳ ವ್ಯಸನವಾಗುತ್ತದೆ. ಸೈನಿಕರೇ, ಮನಸ್ಸಿಗೆ ಸಿಡಿಲು ಬಡಿದಂತಾಗಿದೆ.

**ಸೈನಿಕರು.**—ಯುದ್ಧ ಮಾಡಿಮಾಡಿ ಜನರನ್ನು ಕೊಂದುಕೊಂದು ಎದೆ ಕಲ್ಲಾದರೂ, ಈಗ ಕರಗುತ್ತದೆ.

**ರುಸ್ತುಂ.**— ಎಂತಹ ಧೈರ್ಯ! ಎಂತಹ ಸಾಹಸ!

**ಸೈನಿಕ.**— ಕಾಫರಳಾದರೇನು ? ಅವಳ ಗುಣ ಅಂತಹದಲ್ಲ.

**ರುಸ್ತುಂ.**— ದೇಹವಿದ್ದು ಅದಕ್ಕೊಂದು ಹೆಸರಿರುವಾಗ ಕಾಫರ, ಯವನ ಎಂಬ ಭೇದ.

**ಸೈನಿಕ.**— ಯಾವ ಮಣ್ಣಿನಿಂದ ಇದು ರೂಪುಗೊಂದಿತೋ ಅದಕ್ಕೆ ಸೇರುವಾಗ ಯಾವ ಹೆಸರೂ ಇಲ್ಲ, ಭೇದವೂ ಇಲ್ಲ.

**ರುಸ್ತುಂ.**— ಸೈನಿಕರೇ! ಉತ್ತರಕ್ರಿಯೆ ಇವಳ ಧರ್ಮಾನುಸಾರವೇ ಆಗಬೇಕು.

**ಸೈನಿಕ.**— ಹಾಗೆಯೇ ಸರಿ. ಅರಳಿದ್ದಾಗ ಮುಟ್ಟಲು ಬಿಡದ ಹೂವನ್ನು ಬಾಡಿಬಿದ್ದಾಗ ಕೀಳುವುದರಲ್ಲಿ ಏನು ಪೌರುಷ ?

**ರುಸ್ತುಂ.** — ಎಲ್ಲಿ ಬಿದ್ದಿದೆಯೋ ಅಲ್ಲಿಯೇ ಅದರ ಪರಿಮಳ ಪಸರಿಸಲಿ.

**ಸೈನಿಕ.**— ಯಾವ ಬಳ್ಳಿಯಲ್ಲಿ ಮೂಡಿತೋ ಆ ಬಳ್ಳಿಯ ಬುಡದಲ್ಲೇ ಬಿದ್ದಿರಲಿ.

**ರುಸ್ತುಂ.**— ಬ್ರಾಹ್ಮಣನೊಬ್ಬನಿಂದ ಉತ್ತರ ಕ್ರಿಯೆಗಳನ್ನು ಮಾಡಿಸಿರಿ. ಇವಳ ಸ್ಮರಣೆಗಾಗಿ ಒಂದು ಕಾಲೀಮಂದಿರವನ್ನು ಕಟ್ಟಿಸಿರಿ.

**ಸೈನಿಕ.**— ಎಂತಹ ವ್ಯಕ್ತಿಯೇ ಆಗಲಿ; ಒಂದು ದಿನ ಸ್ಮರಣೆ ಮಾತ್ರ ಉಳಿವುದು. ಅದಕ್ಕೆ ತಕ್ಕ ಗೌರವವನ್ನು ಮಾಡಲೇ ಬೇಕು.

**ರುಸ್ತುಂ.**— ದೇಹವು ಮಣ್ಣೊಳಗೆ ಅಡಗಿದರೂ ಸ್ಮರಣೆಯು ಎದ್ದು ಬರುವುದು.

**ಸೈನಿಕ.** — ಆದುದರಿಂದಲೇ ಲೋಕವು ಬಾಳುವುದು.

**ರುಸ್ತುಂ.**— ಆದುದರಿಂದಲೇ ಸತ್ತವರು ಬದುಕುವವರ ಮಾರ್ಗದರ್ಶಕರಾಗುವರು.

**ಸೈನಿಕ.** — ಆಗಲಿ ಖಾವಂದರೆ, ಅಪ್ಪಣೆಯೇನು ?

**ರುಸ್ತುಂ.** — ಅಪ್ಪಣೆಯೇನೂ ಇಲ್ಲ, ಸೈನಿಕರೇ, ಪ್ರಾರ್ಥನೆ ಮಾತ್ರ.

**ಸೈನಿಕ.**— ಹೌದು; ಎಲ್ಲರೂ ಒಂದಾಗಿ ಪ್ರಾರ್ಥಿಸೋಣ; ಪುಣ್ಯಜೀವಿಗೆ ಪರಲೋಕ ಯಾತ್ರೆಯು ಸುಖಕರವಾಗಲೆಂದು ಹರಸೋಣ.

**ರುಸ್ತುಂ.**—ಆಕೆಯು ಯಾತ್ರೆಗೆ ಹೊರಟ ಸ್ಥಳದಲ್ಲಿ ಸದಾ ವಸಂತವು ನಲಿಯುತ್ತಿರಲಿ ಎಂದು ಹರಸೋಣ.

**ಸೈನಿಕ.**—ಹಾಗಲ್ಲ, ಖಾವಂದರೆ, ನಮ್ಮ ಯೌವನವು ಎಷ್ಟು ಕಾಲ ಉಳಿಯುತ್ತದೆ? ನಾಳೆಯು ಮುಂಜಾನೆ ಬರುವಾಗ ನಮಗೆ ಮುಪ್ಪು ಬರಲೂ ಸಾಕು.

**ರುಸ್ತುಂ.**—ಇಂದಿನ ಸುಗ್ಗಿ ಹೋಗಿ ಫಕ್ಕನೆ ಚಳಿಗಾಲ ಬರಲೂ ಸಾಕು.

**ಸೈನಿಕ.**—ಹೌದು ಖಾವಂದರೆ, ಚಳಿಗಾಲ ಬಂದು ಸಂಜೆ ಬಂದು ಲೋಕವನ್ನು ಬೆದರಿಸುವಾಗ

**ರುಸ್ತುಂ.**—ನಾವು ಅಗ್ಗಿಷ್ಟಿಕೆಗಳ ಸುತ್ತಲೂ ಕುಳಿತು ಚಳಿಯನ್ನಾರಿಸುವಾಗ, ಭಯವನ್ನಾರಿಸುವಾಗ

**ಸೈನಿಕ.**—ಮಕ್ಕಳೂ ಮರಿಮಕ್ಕಳೂ ಸುತ್ತಲೂ ಕುಳಿತು ಕಥೆ ಕೇಳುತ್ತಿರುವಾಗ

**ರುಸ್ತುಂ.**—ಈ ಲೀಲಾವತಿಯ ಕಥೆ ಹೇಳಿ ಹಾಡುವ!

**ಸೈನಿಕ.**—ಹಾಡಿ ಕುಣಿಯುವ!

**ರುಸ್ತುಂ.**—ಕುಣಿದು ಕಣ್ಣೀರು ಸುರಿಸುವ!

**ಸೈನಿಕ.**—ಧನ್ಯರಾದೆವೆಂದು ನಮ್ಮ ಭಾಗ್ಯವನ್ನು ಹೊಗಳುವ!

**ರುಸ್ತುಂ.**—ಕಿವಿಯಿಂದ ಕಿವಿಗೆ, ಹೃದಯದಿಂದ ಹೃದಯಕ್ಕೆ, ಕಣ್ಣೀರಿನಿಂದ ಕಣ್ಣೀರಿಗೆ ಹರಿದು ಅವಳ ನೆನಹು ಸೃಷ್ಟಿಯಿರುವ ವರೆಗೆ ಹಚ್ಚನಿರುವಂತೆ ಮಾಡುವ!

**ಸೈನಿಕ.**—ಆ ಮೇಲೆ ನಮ್ಮ ದಾರಿ ಹಿಡಿಯುವ!




Codialbail Press, Mangalore, 1932.